ಕರಿಗಿರಿಯ 'ಪರಮಪ್ರಿಯ'

# ಶ್ರೀ ತಂದೆ ಮುದ್ದುಮೋಹನದಾಸರು

ಜಯಸಿಂಹ

(ಶ್ರೀತಿರುಮಲೇಶ ಹರಿ ವಿಠಲದಾಸರು)

ಪರಿಮಳ ಪ್ರಕಾಶನ

೧೭೮, ೧೫ನೇ ಮುಖ್ಯರಸ್ತೆ, ಶ್ರೀನಗರ

ಬನಶಂಕರಿ ೧ನೇ ಹಂತ, ೨ನೇ ಬ್ಲಾಕ್

ಬೆಂಗಳೂರು - ೫೬೦ ೦೫೦

# KARIGIRIYA 'PARMAPRIYA' SRI TANDE MUDDUMOHANA DASARU


*Author*
**Sri Jayasimha**
(Sri Tirumalesha Hari Vittala Dasaru)



*Published by*
**Parimala Prakashana**
178, 15th Main, Srinagar,
BSK I Stage, II Block
Bangalore - 560 050
Phone : 22428060

First Edition : 2010



Copies : 1000
Pages : viii+74
**Price : Rs. 30/-**

*Cover page*
M. Venkatesh

*Printed at*
**M.V. Printers**
Bangalore - 560 026
Mobile : 99643 51655


# ಕರಿಗಿರಿಯ 'ಪರಮಪ್ರಿಯ' ಶ್ರೀ ತಂದೆ ಮುದ್ದುಮೋಹನದಾಸರು


*ಲೇಖಕರು*
ಜಯಸಿಂಹ
(ಶ್ರೀತಿರುಮಲೇಶ ಹರಿ ವಿಠಲದಾಸರು)



ಪ್ರಕಾಶಕರು
ಪರಿಮಳ ಪ್ರಕಾಶನ
೧೭೮, ೧೫ನೇ ಮುಖ್ಯರಸ್ತೆ, ಶ್ರೀನಗರ
ಬನಶಂಕರಿ ೧ನೇ ಹಂತ, ೨ನೇ ಬ್ಲಾಕ್
ಬೆಂಗಳೂರು – ೫೬೦ ೦೫೦
ದೂರವಾಣಿ : ೨೨೪೨೮೦೬೦

ಮೊದಲ ಮುದ್ರಣ : ೨೦೧೦



ಪ್ರತಿಗಳು : ೧೦೦೦
ಪುಟಗಳು : viii+೭೪
ಬೆಲೆ : ರೂ. ೩೦/-

*ಮುಖಪುಟ*
ಎಂ. ವೆಂಕಟೇಶ್

ಮುದ್ರಣ
ಎಂ.ವಿ. ಪ್ರಿಂಟರ್ಸ್
ಬೆಂಗಳೂರು – ೫೬೦ ೦೨೬
ಮೊಬೈಲ್ : ೯೯೬೪೩ ೫೧೬೫೫

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ

# ಶ್ರೀ ಪದ್ಮನಾಭತೀರ್ಥ ಪರಂಪರಾ ಶ್ರೀಪಾದರಾಜ ಮಠ

ಮುಳಬಾಗಿಲು

ಪರಮಪೂಜ್ಯ ಶ್ರೀ ಶ್ರೀ ವಿಜ್ಞಾನನಿಧಿತೀರ್ಥ ಶ್ರೀಪಾದಂಗಳವರ

## ಅನುಗ್ರಹ ಸಂದೇಶ

**ಬೆಂ**ಗಳೂರಿನ "ಪರಿಮಳ ಗೆಳೆಯರ ಬಳಗ" ಒಂದು ವಿಶಿಷ್ಟ ಸಂಸ್ಥೆ. ಈ ಸಂಸ್ಥೆಯಲ್ಲಿ ಯಾವುದೇ ವಿಧವಾದ ಪದಾಧಿಕಾರಿ ಮಂಡಲಿಯಾಗಲೀ, ಸದಸ್ಯತ್ವವಾಗಲೀ, ವಂತಿಕೆ ಅಥವಾ ಶುಲ್ಕ ವಸೂಲಿಯಾಗಲೀ ಇಲ್ಲ. ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಕೃಪಾಬಲದಿಂದ ಗುರುರಾಜರಲ್ಲಿ ಅತಿಶಯ ಭಕ್ತಿಯುಳ್ಳ ನೂರಾರು ಸುಜೀವಿಗಳನ್ನು ಈ ಆದರ್ಶಸಂಸ್ಥೆ ಸಂಘಟಿಸಿದೆ. ಮಧ್ವ – ಮಾಧವರ ಸೇವೆಯನ್ನು ವಿಶಿಷ್ಟಶೈಲಿಯಲ್ಲಿ ಮಾಡುತ್ತಾ ಈಗಾಗಲೇ ಇದು ಅಸಂಖ್ಯಾತ ಸಭೆ, ಸಮಾರಂಭಗಳನ್ನು ನಡೆಸಿದೆ, ನೂರಾರು ವಿದ್ವನ್ಮಣಿಗಳನ್ನು, ಸಾಧಕರನ್ನು ಸನ್ಮಾನಿಸಿದೆ. ಭಾರತದಾದ್ಯಂತ ಅನೇಕ ಪುಣ್ಯಕ್ಷೇತ್ರಗಳಿಗೆ ಯಾತ್ರೆ ಕೈಗೊಂಡು ಅಲ್ಲೆಲ್ಲಾ ಧಾರ್ಮಿಕ ಕಾರ್ಯಕ್ರಮಗಳನ್ನು ನಡೆಸಿದೆ. ಎಲ್ಲಕ್ಕೂ ಹೆಚ್ಚಾಗಿ ಇಲ್ಲಿಯತನಕ ಸುಮಾರು ನಲವತ್ತೈದು ಅಪೂರ್ವ ಧಾರ್ಮಿಕ ಗ್ರಂಥಗಳನ್ನು ಪ್ರಕಟಿಸಿವೆ.

ಎಂತಹವರಿಗೂ ಮಾದರಿಯೆನ್ನಿಸಿದ ಈ ಸಂಸ್ಥೆ ಮೂವತ್ತೈದು ವರ್ಷಗಳನ್ನು ಪೂರೈಸಿರುವುದು ತುಂಬಾ ಸಂತೋಷಕರವಾದ ವಿಷಯ. ಈ ಸಂಬಂಧವಾಗಿ ಅದು ಕಲ್ಯಾಣ ನಗರಿಯೆನ್ನಿಸಿದ ಬೆಂಗಳೂರಿನಲ್ಲಿ ಭವ್ಯ

ಸಮಾರಂಭವನ್ನು ಏರ್ಪಡಿಸಿ ಮೂವತ್ತೈದು ಜನ ಶ್ರೇಷ್ಠ ಸಾಧಕರಿಗೆ **"ಪರಿಮಳ ಪ್ರಶಸ್ತಿ"**ಯನ್ನಿತ್ತು ಗೌರವಿಸುತ್ತಿರುವುದೂ, ಹಲವಾರು ಗ್ರಂಥಗಳನ್ನು ಪ್ರಕಟಿಸುತ್ತಿರುವುದೂ ಸ್ತುತ್ಯಾರ್ಹವಾಗಿದ್ದು ಹರಿಗುರುಗಳ ಒಲುಮೆಗೆ ಕಾರಣವಾಗಿದೆ. ತನ್ನ ಪ್ರಕಟನಾಂಗವಾದ **"ಪರಿಮಳ ಪ್ರಕಾಶನ"**ದಿಂದ ಈ ಸಂಸ್ಥೆ ಹೊರತರುತ್ತಿರುವ **"ಕರಿಗಿರಿಯ 'ಪರಮಪ್ರಿಯ' ಶ್ರೀತಂದೆ ಮುದ್ದುಮೋಹನ ದಾಸರು"** ಎಂಬ ಪುಸ್ತಕ ಭಕ್ತಜನತೆಯ ವಿಶೇಷ ಆದರಣೆ ಗಳಿಸಲಿ. ತನ್ನ ಮೂವತ್ತೈದನೇ ವಾರ್ಷಿಕೋತ್ಸವವನ್ನು ಆದರ್ಶಪ್ರಾಯವಾಗಿ ಆಚರಿಸುತ್ತಿರುವ "ಪರಿಮಳ ಗೆಳೆಯರ ಬಳಗ"ವನ್ನು ಹಾಗೂ ಈ ಕೃತಿಯನ್ನು ರಚಿಸಿರುವ ಬಳಗದ ಸಂಸ್ಥಾಪಕರೂ ಮತ್ತು ಗುರುರಾಜರ ಕೃಪಾಪಾತ್ರರೂ ಆದ ಶ್ರೀಜಯಸಿಂಹ ಅವರನ್ನು ನಮ್ಮ ಉಪಾಸ್ಯಮೂರ್ತಿ ಶ್ರೀಹಯವದನ ರಂಗವಿಠಲಾತ್ಮಕ ಗೋಪೀನಾಥದೇವರು ಪೂರ್ಣಾನುಗ್ರಹ ಮಾಡಿ ಸಂರಕ್ಷಿಸಲಿ ಎಂದು ಪ್ರಾರ್ಥಿಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು

**ಶ್ರೀವಿಜ್ಞಾನನಿಧಿತೀರ್ಥ ಶ್ರೀಪಾದಂಗಳವರು**

ಬೆಂಗಳೂರು ಮೊಕ್ಕಾಂ
ದಿನಾಂಕ: ೧೩.೫.೨೦೧೦

# ಬಿನ್ನಹ

ಶ್ರೀವಿಜಯದಾಸರ ಸಾಕ್ಷಾತ್ ಶಿಷ್ಯರಾದ ಶ್ರೀವೇಣುಗೋಪಾಲದಾಸರ ಪಾವನ ಪೀಳಿಗೆಯಲಿ ಬಂದಿರುವ ದೊಡ್ಡಬಳ್ಳಾಪುರದ ಶ್ರೀಮುದ್ದುಮೋಹನದಾಸರ ಶಿಷ್ಯ ಶ್ರೇಷ್ಠರೇ ಕರಿಗಿರಿಯ ಸುಬ್ಬರಾಯದಾಸರೆಂದು ವಿಖ್ಯಾತರಾದ 'ಪರಮಪ್ರಿಯ' ಶ್ರೀತಂದೆ ಮುದ್ದುಮೋಹನದಾಸರು. ನಿಸರ್ಗದ ಮಡಿಲಲ್ಲಿ ಅರಳಿ ನಿಂತಿರುವ ನರಸೀಪುರದಲ್ಲಿ ಜನಿಸಿ, ಪುರಾಣ ಪ್ರಸಿದ್ಧ ಪುಣ್ಯಕ್ಷೇತ್ರವಾದ ದೇವರಾಯನದುರ್ಗದಲ್ಲಿ ನೆಲೆಸಿ ಕ್ಷೇತ್ರ ಪ್ರಭುವಾದ ಶ್ರೀಲಕ್ಷ್ಮೀನರಸಿಂಹ ಸ್ವಾಮಿಯನ್ನು ಅಖಂಡವಾಗಿ ಉಪಾಸಿಸಿ ಬಿಂಬಾಪರೋಕ್ಷವನ್ನು ಪಡೆದ ದಾಸರಾಯರು ಶ್ರೀಕ್ಷೇತ್ರದಲ್ಲಿ ತಾವೇ ಪ್ರಾರಂಭಿಸಿದ "ದಾಸಕೂಟ ಸಭಾಮಂದಿರ"ದಲ್ಲಿ ಕದರುಮಂಡಲಿಗಿಯ ಕಾಂತೇಶನ ಸನ್ನಿಧಾನದಿಂದ ತಂದ ಶ್ರೀಸುಂದರೇಶ ಪ್ರಾಣದೇವರನ್ನು ಪ್ರತಿಷ್ಠಾಪಿಸಿ ಅಲ್ಲಿ ನಿರಂತರ ಜ್ಞಾನಕಾರ್ಯಗಳು ನಡೆಯುವಂತೆ ವ್ಯವಸ್ಥೆ ಮಾಡಿದರು. 1165 ಜನ ಸುಜೀವಿಗಳಿಗೆ ಅಂಕಿತೋಪದೇಶ ನೀಡಿ ಹರಿದಾಸ ಪೀಳಿಗೆಯನ್ನು ವ್ಯಾಪಕವಾಗಿಯೂ, ಸಮೃದ್ಧವಾಗಿಯೂ ಬೆಳೆಸಿದರಲ್ಲದೆ ಅಸಂಖ್ಯಾತ ಸಾಧಕರಿಗೆ ಮಾರ್ಗದರ್ಶಕರಾಗಿ ವಿಪುಲ ಸಾಹಿತ್ಯ ಸೃಷ್ಟಿಗೆ ಕಾರಣರಾದರು. ಮಧುಕರಿ ವೃತ್ತಿಯ ಮೂಲಕ ಮಧುಸೂದನನ ಮಧುರ ನಾಮವನ್ನು ಮನೆ–ಮನೆಗೂ, ಮನ–ಮನಕ್ಕೂ ಮುಟ್ಟಿಸಿ ಜನರಲ್ಲಿ ಆಸ್ತಿಕ್ಯ ಭಾವನೆಯನ್ನು ಉದ್ದೀಪನಗೊಳಿಸಿದರು. "ಪರಮಾರ್ಥ ಚಂದ್ರೋದಯ" ಎಂಬ ಧಾರ್ಮಿಕ ಮಾಸಪತ್ರಿಕೆಯ ಸಂಪಾದಕರಾಗಿ ದಾಸಧರ್ಮವನ್ನು ನಾಡಿನಾದ್ಯಂತ ಪ್ರಚುರಿಸಿದರು. ವಿದ್ವತ್ಪೂರ್ಣವಾದ ತಮ್ಮ ಅಸ್ಖಲಿತ ವಾಣಿಯ ಮೂಲಕ ಸಮಾಜದ ಓರೆ–ಕೋರೆಗಳನ್ನು ತಿದ್ದಿದರಲ್ಲದೆ ವಿಜಯ ಪುರಂದರರ ಅವತಾರ

ಕಾಲದಲ್ಲಿ ನಿರ್ಮಾಣಗೊಂಡ ಹರಿದಾಸ ಸಾಹಿತ್ಯದ ಸುವರ್ಣಯುಗವನ್ನು ಪುನಃ ಸೃಷ್ಟಿಸಿ ದಾಸಧರ್ಮ ಧ್ವಜವನ್ನು ಮುಗಿಲೆತ್ತರಕ್ಕೆ ಎತ್ತಿ ಹಿಡಿದರು.

ಇಂತಹ ಯುಗಪುರುಷರನ್ನು ಕುರಿತು ಗುರುವನುಗ್ರಹದಿಂದ ನಾನು ಬರೆದ **"ಕರಿಗಿರಿಯ 'ಪರಮಪ್ರಿಯ' ಶ್ರೀ ತಂದೆ ಮುದ್ದುಮೋಹನದಾಸರು"** ಎಂಬ ಕಿರುಹೊತ್ತಿಗೆ ಪರಿಮಳ ಪ್ರಕಾಶನದಿಂದ ಪ್ರಕಟಗೊಳ್ಳುತ್ತಿದೆ. ಈ ಕೃತಿಗೆ ಅನುಗ್ರಹ ಸಂದೇಶ ನೀಡಿ ಪರಮಾನುಗ್ರಹ ಮಾಡಿದ ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲ ಮಹಾಸಂಸ್ಥಾನ ಶ್ರೀಪದ್ಮನಾಭತೀರ್ಥ ಪರಂಪರಾ ಶ್ರೀಪಾದರಾಜ ಮಠಾಧೀಶರಾದ ಪರಮಪೂಜ್ಯ ಶ್ರೀವಿಜ್ಞಾನನಿಧಿತೀರ್ಥ ಶ್ರೀಪಾದಂಗಳವರಿಗೆ ನನ್ನ ಶಿರಸಾಷ್ಟಾಂಗ ನಮಸ್ಕಾರಗಳನ್ನು ಸಲ್ಲಿಸುತ್ತೇನೆ. ಈ ಗುರುಕಾರ್ಯದಲ್ಲಿ ಸಹಕರಿಸಿದ ಪರಿಮಳ ಗೆಳೆಯರ ಬಳಗದ ಎಲ್ಲಾ ಮಿತ್ರರಿಗೂ ನಾನು ಋಣಿ. ಅಂದವಾಗಿ ಅಕ್ಷರ ಜೋಡನೆ ಮಾಡಿ ಮುದ್ರಿಸಿದ ಎಂ.ವಿ. ಪ್ರಿಂಟರ್ಸ್ ಅವರಿಗೆ ನಾನು ಆಭಾರಿ.

"ಅಪ್ಪಾನ ನಾಮವನು ಒಪ್ಪತ್ತಾದರೂ ಭಜಿಸಿ
ಒಪ್ಪತ್ತುಂಬುವೆನಯ್ಯ ತಂದೆ ಮುದ್ದುಮೋಹನವಿಠಲ॥"

ಜಯಸಿಂಹ
(ಶ್ರೀ ತಿರುಮಲೇಶ ಹರಿ ವಿಠಲದಾಸರು)

ಬೆಂಗಳೂರು
೧೬.೬.೨೦೧೦

# ಪರಿವಿಡಿ





# ಕಾಯೋ ಕಾಯೋ ಗುರುವರ್ಯ

ಕಾಯೋ ಕಾಯೋ ಗುರುವರ್ಯ। ಕಾಯೋ ಕಾಯೋ ॥ಪ॥

ಕಾಯೋ ಕಾಯೋ ಗುರುವರ್ಯ ಪರಮಪ್ರಿಯ
ಜೀಯ ನಿನ್ನಯ ಪಾದಕೆರಗುವೆನಯ್ಯಾ ॥ಅ.ಪ॥

ಒಂದರಿತವನಲ್ಲ। ಕುಂದನು ಎಣಿಸದೆ
ಬಂದು ಸಲಹೋ। ತಂದೆ ಮುದ್ದುಮೋಹನ್ನ ॥೧॥

ಹಿಂದಿನ ಸುಕೃತದಿ। ಬಂದು ಜನಿಸಿದೆ
ನಂದ ಮುನಿಯ ಮತ। ಸಿಂಧುವಿನಲ್ಲಿ ॥೨॥

ಇಂದಾದರು ತವ ದ್ವಂದ್ವಪದವ ಮನ
ಮಂದಿರದಲಿ ತೋರಿ। ದುಂದುಗ ಬಿಡಿಸೋ ॥೩॥

ಎಂದಾಗ್ವುದೊ ತಂದೆ। ಇಂದಿರೇಶ ಪದ
ದ್ವಂದ್ವ ಸಂದರ್ಶನ। ಸಂಧಿಸೊ ಬೇಗನೆ ॥೪॥

ತಂದೆ ನಿನ್ನಲಿ ಗುರುಗೋ। ವಿಂದ ವಿಠಲನ
ಅಂದ ಮೂರುತಿಯನು। ಛಂದದಿ ತೋರೋ ॥೫॥



## ಕರಿಗಿರಿಯ 'ಪರಮಪ್ರಿಯ'

# ಶ್ರೀ ತಂದೆ ಮುದ್ದುಮೋಹನದಾಸರು

ಮುದ್ದುಮೋಹನ ಕರಕಮಲ ಸಂಜಾತಂ ವರಕರಿಗಿರಿ ಕ್ಷೇತ್ರವಾಸಂ।
ನೃಸಿಂಹ ಪಾದಾರವಿಂದೈಕ ದಾಸಂ ತಂದೆಮುದ್ದುಮೋಹನ
ದಾಸವರ್ಯಂ ಭಜೇ॥

**ಕ**ಣ್ಸೆಳುವ ಆಜಾನುಬಾಹು, ಕುಸ್ತಿಯ ವಸ್ತಾದರಂತೆ ಒಳ್ಳೆ ಕಟ್ಟುಮಸ್ತಾದ ಮೈಕಟ್ಟು, ಪೂರ್ಣ ಚಂದ್ರನಂತೆ ಶೋಭಿಸುವ ಪ್ರಶಾಂತ ಮುಖಮಂಡಲ. ಅಗಲವಾದ ಹಣೆ. ವೈಕುಂಠಕ್ಕೆ ಹೆದ್ದಾರಿ ತೋರುತ್ತಿರುವಂತೆ ಹಣೆಯಲ್ಲಿ ತಿದ್ದಿ ಹಚ್ಚಿದ ಅಂಗಾರ ಅಕ್ಷತೆ. ನೋಡಿದವರ ಅಂತರಂಗದ ತಳವನ್ನು ಕ್ಷಣಾರ್ಧದಲ್ಲಿ ಶೋಧಿಸಿ ತಿಳಿಯಬಲ್ಲ ವಿಶಾಲವಾದ ಪ್ರಖರ ಕಣ್ಣುಗಳು. ನೊಂದ ಹೃದಯಗಳಿಗೆ ಸಾಂತ್ವನವೀಯುವ ದೃಷ್ಟಿಕೋನ. ಮುರುಟಿದ ಮನಸ್ಸಿಗೆ ಮುದ ನೀಡುವ ಮಂದಹಾಸ. ವಿಸ್ತೃತವಾದ ವಕ್ಷಸ್ಥಳ. ವೈರಾಗ್ಯ ಸೂಚಕವಾಗಿ ತಲೆಯ ಮೇಲೆ ಸುತ್ತಿ ಕಟ್ಟಿದ ಕಾವಿಯ ಮುಂಡಾಸು. ಭುಜದಿಂದ ಮುಂಗಾಲಿನವರೆಗೂ ಮುಟ್ಟುವಂತೆ ಇಳಿಬಿದ್ದ ಕಾವಿಯ ನಿಲುವಂಗಿ. ಇಂದ್ರಿಯ ನಿಗ್ರಹದ ಸಂಕೇತವಾಗಿ ಕರದಲ್ಲಿ ವಿರಾಜಿಸುವ ದಂಡ. ವೈಷ್ಣವತ್ವದ ಸೂಚಕವಾಗಿ ಕೊರಳಲ್ಲಿ ರಾರಾಜಿಸುವ ತುಳಸಿ ಮತ್ತು ಕಮಲಾಕ್ಷಿ ಮಾಲೆಗಳು. ಬಲಗಿವಿಯ ಒಳ ಅಂಚಿನಲ್ಲಿ ಶೋಭಿಸುವ ಹರಿ ನಿರ್ಮಾಲ್ಯ. ಜಿಹ್ವೆಯಲ್ಲಿ ಸದಾ ಹರಿನಾಮೋಚ್ಚಾರಣೆ. ಮನಸ್ಸಿನಲ್ಲಿ ಸದಾ ಹರಿಚರಣ ಸ್ಮರಣೆ. ಹೃದಯ ಮಂದಿರದಲ್ಲಿ ತಳತಳಿಸಿ ಹೊಳೆವ ಗುರುತೋರಿದ ಬಿಂಬ. ವೈಷ್ಣವ ಚಿಹ್ನೆಗಳಿಂದ

ಅವಧೂತರಂತೆ ಕಂಗೊಳಿಸುವ ಪವಿತ್ರ ಗಾತ್ರ. ಒಮ್ಮೆ ನೋಡಿದರೆ ಸಾಕು ಮತ್ತೊಮ್ಮೆ ನೋಡಬೇಕೆನಿಸುವ, ಭಯ ಭಕ್ತಿ ಗೌರವ ಭಾವನೆಗಳು ಒಡಮೂಡಿ ಹಾಗೇ ನೋಡುತ್ತಲೇ ಇರಬೇಕೆನಿಸುವ ಘನ ಗಂಭೀರ ವ್ಯಕ್ತಿತ್ವ!

## ಯಾರಿವರು?

ಇವರೇ ನರಸೀಪುರ ಶ್ರೀಸುಬ್ಬರಾಯದಾಸರೆಂದು ಪ್ರಖ್ಯಾತರಾದ ಕರಿಗಿರಿ ಅಥವಾ ದೇವರಾಯನದುರ್ಗದ 'ಪರಮಪ್ರಿಯ' ಶ್ರೀ ತಂದೆ ಮುದ್ದುಮೋಹನ ದಾಸರು. ದೊಡ್ಡಬಳ್ಳಾಪುರದ ಶ್ರೀರಾಘವೇಂದ್ರದಾಸರೆಂದು ಹೆಸರಾದ ಶ್ರೀಮುದ್ದುಮೋಹನದಾಸರ ಕರಕಮಲ ಸಂಜಾತರು. ಕ್ರಿ.ಶ. 1865ರಿಂದ 1940ರ ವರೆಗೆ ಸಜ್ಜನರಿಗೆ ದೃಷ್ಟಿ ಗೋಚರವಾಗಿ ಮಾರ್ಗದರ್ಶನ ಮಾಡಿದ ಅವತಾರ ಪುರುಷರು. ನಿಸರ್ಗದ ಮಡಿಲಲ್ಲಿ ಅರಳಿ ನಿಂತಿರುವ ನರಸೀಪುರದಲ್ಲಿ ಜನಿಸಿ, ಕರಿಗಿರಿಯೆಂದು ಪ್ರಸಿದ್ಧವಾದ ದೇವರಾಯನದುರ್ಗದಲ್ಲಿ ನೆಲೆಸಿ, ಕ್ಷೇತ್ರಪ್ರಭುವಾದ ಶ್ರೀಲಕ್ಷ್ಮೀನರಸಿಂಹ ಸ್ವಾಮಿಯನ್ನು ಒಲಿಸಿ, ದಾಸಕೂಟ ಸಭಾಮಂದಿರವನ್ನು ಸ್ಥಾಪಿಸಿ, ಜೀವೋತ್ತಮರಾದ ಶ್ರೀಸುಂದರೇಶ ಪ್ರಾಣದೇವರನ್ನು ಕದರುಮಂಡಲಿಗಿಯಿಂದ ತಂದು ಮಂದಿರದಲ್ಲಿ ನಿಲ್ಲಿಸಿ, ಹರಿ ಕೈಂಕರ್ಯವನ್ನು ಬಾಳಿನ ಪರಮೋಚ್ಚ ದೀಕ್ಷೆಯಾಗಿ ಸ್ವೀಕರಿಸಿ, ಸಂಪರ್ಕಕ್ಕೆ ಬಂದ ಸಹಸ್ರಾರು ಸುಜೀವಿಗಳಿಗೆ ಸಾಧನೆಯ ಹೆದ್ದಾರಿ ತೋರಿಸಿ, ಬಾಳೆಂಬ ಗಜವನ್ನು ಅಂಕೆಯಲ್ಲಿಟ್ಟುಕೊಳ್ಳುವ ಅಂಕುಶೋಪಾದಿಯ ಅಂಕಿತವನ್ನು ಉಪದೇಶಿಸಿ ಮನ್ನಡೆಸಿದ ಮಹಾತ್ಮರು. ಶ್ರೀಹಂಸನಾಮಕ ಪರಮಾತ್ಮನ ಪರಂಪರೆಯಲ್ಲಿ ಬಂದ ಶ್ರೀವ್ಯಾಸತೀರ್ಥ ಶ್ರೀಪಾದಂಗಳವರ ಸಾಕ್ಷಾತ್ ಶಿಷ್ಯರಾದ ಶ್ರೀಪುರಂದರದಾಸರಿಂದ ಬೆಳಸಲ್ಪಟ್ಟ, ಶ್ರೀವಿಜಯದಾಸರಿಂದ ಮುಂದುವರೆಸಲ್ಪಟ್ಟ, ಶ್ರೀವೇಣುಗೋಪಾಲದಾಸರ ಪಾವನ ಪೀಳಿಗೆಯಲ್ಲಿ ಬೆಳಗಿದ ಹರಿದಾಸ ಶ್ರೇಷ್ಠರು. ಉಡುಪಿಯ ಅಷ್ಟ ಮಠಗಳಲ್ಲಿ ಒಂದಾದ ಶ್ರೀಪುತ್ತಿಗೆ ಮಠದ ಪರಂಪರೆಯಲ್ಲಿ ಬಂದ ಶತಾಯುಷಿಗಳೂ, ತಪಸ್ವಿಗಳೂ ಆದ ಶ್ರೀ ಸುಧೀಂದ್ರತೀರ್ಥ ಶ್ರೀಪಾದಂಗಳವರಿಂದ "ಪರಮಪ್ರಿಯ" ಎಂಬ ಅನ್ವರ್ಥವಾದ ಬಿರುದನ್ನು ಪಡೆದ ಸಾತ್ವಿಕ ಸಂಪನ್ನರು!

ಹರಿದಾಸ ಪರಂಪರೆಯ ಪುನರುತ್ಥಾನಕ್ಕಾಗಿ ಮತ್ತು ದಾಸ ಸಾಹಿತ್ಯದ

ಬೆಳವಣಿಗೆಗಾಗಿ ಶ್ರೀತಂದೆ ಮುದ್ದುಮೋಹನದಾಸರು ಮಾಡಿದ ಸೇವೆ ಮತ್ತು ಕೊಟ್ಟ ಕೊಡಗೆ ಅಮೂಲ್ಯವಾದದ್ದು. ಇದಕ್ಕಾಗಿ ದಾಸರು ತಮ್ಮ ಬದುಕನ್ನೇ ಮೀಸಲಿಟ್ಟು ಹರಿದಾಸರ ತತ್ವಪುಂಜಗಳನ್ನು ಮನೆ–ಮನೆಗೂ, ಮನ–ಮನಕ್ಕೂ ಪರಿಣಾಮಕಾರಿಯಾಗಿ ಮುಟ್ಟಿಸಿದರು. ಕಿರುನಾಲೆಯಂತೆ ಎಲ್ಲೋ ಹರಿಯುತ್ತಿದ್ದ ಹರಿದಾಸ ಪರಂಪರೆಗೆ ಹೊಸ ಕಸುವನ್ನೂ, ಹೊಸ ತಿರುವನ್ನೂ ನೀಡಿ, ಹರಿದಾಸ ವಾಹಿನಿ ಸಾಗರರೂಪ ತಾಳಿ ಭೋರ್ಗರೆದು ಉಕ್ಕಿ ಹರಿಯುವಂತೆ ಮಾಡಿದರು. ದಾಸ ಪಂಥೀಯರನ್ನು ವಿದ್ಯಾಶೂನರೆಂದೂ, ಕರ್ಮಠ ಹೀನರೆಂದೂ ಹೀಗಳೆಯುತ್ತಿದ್ದ ವಿನಯಶೂನ್ಯ ಪಂಡಿತರಿಗೆ ಅಸ್ಖಲಿತವಾದ ತಮ್ಮ ವಿದ್ವತ್ಪೂರ್ಣ ಅನುಭಾವ ವಾಣಿಯ ಮೂಲಕ ಮತ್ತು ಸತ್ಕರ್ಮಾಚರಣೆಯ ಮೂಲಕ ಹರಿದಾಸರ ಹಿರಿಮೆಯ ಅರಿವು ಮೂಡಿಸಿದರು. ಕನ್ನಡ ಭಾಷೆಯಲ್ಲಿರುವ ಹರಿದಾಸವಾಣಿಯನ್ನು ಪ್ರಾಕೃತೋಕ್ತಿಗಳೆಂದು ತಾತ್ಸಾರ ಮಾಡುತ್ತಿದ್ದ ಮಡಿವಂತರ ಕಣ್ಣು ತೆರೆಸುವಂತೆ ಗಹನವಾದ ಶಾಸ್ತ್ರವಿಚಾರಗಳನ್ನು ಅರ್ಥಸ್ಫುರಿಸುವ ಸರಳ ಶೈಲಿಯಲ್ಲಿ ನಿರೂಪಿಸಿದರು. ಶ್ರೀಪಾದರಾಜರು, ವ್ಯಾಸರಾಜರು, ವಾದಿರಾಜರು ಮುಂತಾದ ಯತಿಪುಂಗವರಿಂದ ಉದ್ಧೃತವಾದ ಹರಿದಾಸ ಪಂಥದ ಪಾವಿತ್ರ್ಯತೆಯನ್ನು ತಮ್ಮ ಮಹಿಮಾನ್ವಿತ ವ್ಯಕ್ತಿತ್ವದ ಮೂಲಕ ಪರಿಣಾಮಕಾರಿಯಾಗಿ ಪರಿಚಯ ಮಾಡಿಕೊಟ್ಟರು. ಶ್ರೀಪುರಂದರದಾಸರು, ವಿಜಯದಾಸರು, ಗೋಪಾಲದಾಸರು ಮುಂತಾದ ಹರಿದಾಸವರೇಣ್ಯರ ರೋಮಾಂಚಕರ ಜೀವನ ಚಿತ್ರಣವನ್ನು ಭಗದರ್ಪಿತವಾದ ತಮ್ಮ ಬದುಕಿನ ಮೂಲಕ ಸುಜೀವಿಗಳಿಗೆ ತೋರಿಕೊಟ್ಟರು. ನಶಿಸಿ ಹೋಗುತ್ತಿದ್ದ ದಾಸಪಂಥಕ್ಕೆ ಪುನಶ್ಚೇತನ ನೀಡಿ ವಿಸ್ತೃತವಾದ ತಮ್ಮ ಶಿಷ್ಯ ಸಂತತಿಯ ಮೂಲಕ ಸದೃಢವಾದ ಸಂಘಶಕ್ತಿಯ ಸಂಪುಟವನ್ನು ಅಳವಡಿಸಿದರು. ತಮ್ಮ ಬದುಕು–ಬೋಧೆಯ ಬೆಳಕಿನಲ್ಲಿ ಸಾಧನೆಯ ಪಥೋನ್ಮುಖರಾಗಿ ಮುನ್ನಡೆಯುವ ಅಸೀಮ ಚೈತನ್ಯ ತುಂಬಿ, ದಾಸ ಪಂಥೀಯರಿಗೆ ಒಂದು ಸಶಕ್ತವಾದ ದನಿಯನ್ನು ಒದಗಿಸಿ, ಹರಿದಾಸರು ಅಭಿಮಾನದಿಂದ ಹರಿಕೈಂಕರ್ಯನಿರತರಾಗಿ ಸತ್ಸಾಧನೆ ಮಾಡಿಕೊಳ್ಳುವ ಆರೋಗ್ಯಪೂರ್ಣ ವಾತಾವರಣವನ್ನು ಶ್ರೀತಂದೆ ಮುದ್ದುಮೋಹನದಾಸರು ನಿರ್ಮಾಣ ಮಾಡಿದರು.

ಹರಿದಾಸ ಸಾಹಿತ್ಯ ಸುಧೆಯನ್ನು ಸಮಾಜದಾದ್ಯಂತ ಸಿಂಪಡಿಸಲು "ಪರಮಾರ್ಥ ಚಂದ್ರೋದಯ" ಎಂಬ ಮಾಸಪತ್ರಿಕೆಯನ್ನು ತಮ್ಮ ಜೀವಿತದುದ್ದಕ್ಕೂ ನಿಯಮಿತಯಾಗಿ ನಡೆಸುತ್ತಾ ಧಾರ್ಮಿಕ ಪತ್ರಿಕೋದ್ಯಮಕ್ಕೆ ತಂದೆ ಮುದ್ದುಮೋಹನದಾಸರು ಶ್ರೀಕಾರ ಹಾಕಿದರು. ಅಮೂಲ್ಯವಾದ ಅಧ್ಯಾತ್ಮಿಕ ಮೌಲ್ಯಗಳನ್ನು ತಮ್ಮ ಪತ್ರಿಕೆಯಲ್ಲಿ ಸರಳ ಸುಂದರಾಗಿ ಸಾದರಪಡಿಸಿ ಧಾರ್ಮಿಕ ಜಾಗೃತಿ ಮೂಡಿಸಿದರು. ದಾಸರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದ್ದ "ಪರಮಾರ್ಥ ಚಂದ್ರೋದಯ"ದಿಂದ ಸ್ಫೂರ್ತಿ ಪಡೆದು ತಮ್ಮ ಜೀವಿತವನ್ನು ಸಾತ್ವಿಕ ದಿಕ್ಕಿನತ್ತ ಮಾರ್ಪಡಿಸಿಕೊಂಡವರ ಸಂಖ್ಯೆ ಲೆಕ್ಕವಿಲ್ಲದಷ್ಟು. ದಾಸರ ವಾಕ್ ಶೈಲಿ ಅಪ್ರತಿಮವಾದದ್ದು. ಮೃದು-ಮಧುರವಾದ ಅವರ ಪ್ರವಚನ ಕೇಳುವವರಿಗೆ ಅಮೃತಪಾನ. ದಾಸರ ಉಪದೇಶ ಸಾಮರ್ಥ್ಯವನ್ನು ಗುರುತಿಸಿ ಆಗಿನ ಸರ್ಕಾರ ಬೆಂಗಳೂರು ಜೈಲಿನ ಕೈದಿಗಳಿಗೆ ವಾರಕ್ಕೊಮ್ಮೆ "ಧರ್ಮೋಪದೇಶ" ನೀಡಲು ಅವರನ್ನು ನೇಮಕ ಮಾಡಿತ್ತು. ದಾಸರ ಸತ್ವಪೂರ್ಣ ಉಪದೇಶ ಹಲವಾರು ಗುರುತರ ಅಪರಾಧಗಳನ್ನು ಮಾಡಿದ್ದ ಖೈದಿಗಳ ಮನಃ ಪರಿವರ್ತನೆಗೆ ಕಾರಣವಾಗುತ್ತಿತ್ತಲ್ಲದೆ ಅವರನ್ನು ಒಳ್ಳೆಯ ಹಾದಿಗೆ ತರಲು ಪ್ರೇರಣೆಯನ್ನೂ ನೀಡುತ್ತಿತ್ತು.

ತಮ್ಮ ಜೀವಿತಾವಧಿಯಲ್ಲಿ ದಾಸರು ಯಾವುದೇ ವಿಧವಾದ ಪ್ರಚಾರ ಕೀರ್ತಿ ಪ್ರತಿಷ್ಠೆಗಳಿಗೆ ಅವಕಾಶ ಕೊಡಲಿಲ್ಲ. ಬದುಕಿನಲ್ಲಿ ಬಂದುದ್ದನ್ನು "ತಂದೆ ಮುದ್ದುಮೋಹನವಿಠಲನ ಪರಮಪ್ರಸಾದ"ವೆಂದು ಸಂತೃಪ್ತಭಾವದಿಂದ ಸ್ವೀಕರಿಸಿದರು. ಶುದ್ಧ ಉಪಕಾರ ಬುದ್ಧಿಯಿಂದ ಸಮಾಜದ ಓರೆ-ಕೋರೆಗಳನ್ನು ತಿದ್ದಿದರು. ಪ್ರಾಮಾಣಿಕ ಹಾಗೂ ಪಾರದರ್ಶಿಕವಾದ ತಮ್ಮ ಜೀವನದ ಮೂಲಕ ದಾಸ ಪಂಥೀಯರಿಗೆ ಒಂದು ಮಾದರಿಯನ್ನೂ, ಮೇಲ್ಪಂಕ್ತಿಯನ್ನೂ ಹಾಕಿಕೊಟ್ಟರು.

ಪುರಂದರದಾಸರ ನಂತರ ಕೆಲವು ಕಾಲ ಸ್ಥಗಿತಗೊಂಡತ್ತಿದ್ದ ಹರಿದಾಸ ಪಂಥವನ್ನು ಮುಂದುವರೆಸಲು ಶ್ರೀವಿಜಯದಾಸರು ಅವತರಿಸಿದ ಹಾಗೆ ತಂದೆ ಮುದ್ದುಮೋಹನ ವಿಠಲಾಂಕಿತರಾದ ಶ್ರೀ ತಂದೆ ಮುದ್ದುಮೋಹನದಾಸರು ಮತ್ತೆ ಮುಸುಕಾಗಿದ್ದ ಹರಿದಾಸ ಪರಂಪರೆಯ ನಭೋ ಮಂಡಲದಲ್ಲಿ ಉಜ್ವಲ

ತಾರೆಯಂತೆ ಮೂಡಿಬಂದರು. ಕನ್ನಡ ಹರಿದಾಸ ಸಾಹಿತ್ಯಸೃಷ್ಟಿಗೆ ವಿಸ್ತೃತವಾದ ಭೂಮಿಕೆಯನ್ನು ನಿರ್ಮಾಣ ಮಾಡಿ, ಸಾಧನೆಯ ಹಾದಿಯಲ್ಲಿ ಹೆದ್ದಾನೆಯಂತೆ ಮುನ್ನಡೆದು ಪ್ರಾತಃಸ್ಮರಣೀಯರ ಸಾಲಿನಲ್ಲಿ ಸೇರ್ಪಡೆಯಾದರು.

## ಜನನ ಮತ್ತು ಬಾಲ್ಯ

ತಂದೆ ಮುದ್ದುಮೋಹನದಾಸರ ಜನ್ಮಸ್ಥಳ ಬೆಂಗಳೂರು ಜಿಲ್ಲೆ ನೆಲಮಂಗಲ ತಾಲ್ಲೂಕಿಗೆ ಒಳಪಡುವ ಡಾಬಸ್‌ಪೇಟೆ ಮಾರ್ಗದ ನರಸೀಪುರ ಎಂಬ ಪುಟ್ಟ ಹಳ್ಳಿ. ನಿಸರ್ಗದ ಮಡಿಲಲ್ಲಿ ಅರಳಿ ನಿಂತಿರುವ ಈ ಗ್ರಾಮ ತುಮಕೂರು ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಶ್ರೀಲಕ್ಷ್ಮೀನರಸಿಂಹ ಸ್ವಾಮಿಯ ಆವಾಸ ಸ್ಥಾನವಾದ ಪುರಾಣ ಪ್ರಸಿದ್ಧ ಕರಿಗಿರಿ ಕ್ಷೇತ್ರ ಅಥವಾ ದೇವರಾಯನದುರ್ಗದ ಸಮೀಪದಲ್ಲಿದೆ. ಇದಲ್ಲದೆ ನರಸೀಪುರದ ಸುತ್ತಮುತ್ತ 'ಪುಂಗವಾದ್ರಿ' ಎಂದು ಪ್ರಸಿದ್ಧವಾದ ಶಿವಗಂಗೆ ಬೆಟ್ಟ, 'ಕೂರ್ಮಾಚಲ' ಎಂದು ಪ್ರಸಿದ್ಧವಾದ ಹಿಕ್ಕಲ್ಲು, 'ರಾಮಾಚಲ' ಎಂದು ಪ್ರಸಿದ್ಧವಾದ ರಾಮದೇವರ ಬೆಟ್ಟ ಅಥವಾ ರಾಮಗಿರಿ ಹಾಗೂ ಧನಂಜಯಾದ್ರಿ ಎಂದು ಹೆಸರಾದ ಹೆಗ್ಗುಂದ ಮುಂತಾದ ಬೆಟ್ಟಗಳಿದ್ದು ಈ ಗ್ರಾಮ ಪುಣ್ಯಕ್ಷೇತ್ರವಾಗಿ ಕಂಗೊಳಿಸಲು ಕಾರಣವಾಗಿವೆ. ಇದಕ್ಕೆ ಕಳಸವಿಟ್ಟಂತೆ ನರಸೀಪುರದಲ್ಲಿ ಕುಂದಾಪುರ ಶ್ರೀವ್ಯಾಸರಾಜ ಮಠದ ಪರಂಪರೆಯಲ್ಲಿ ಬಂದಿರುವ ಶ್ರೀ ಲಕ್ಷ್ಮೀನಾಥತೀರ್ಥರೆಂಬ ಯತಿಪುಂಗವರ ಮೂಲ ಬೃಂದಾವನವೂ ಇದೆ. ತಪೋನಿಧಿಗಳಾದ ಈ ಮಹಾನುಭಾವರು ಕುಂದಾಪುರ ಅಥವಾ ಅಬ್ಬೂರು ಶ್ರೀವ್ಯಾಸ್ಯರಾಜ ಮಠದ ಪೀಳಿಗೆಯಲ್ಲಿ ಬಂದ ಇಪ್ಪತ್ತೈದನೇ ಯತಿಗಳಾಗಿದ್ದು ಆಚಾರ್ಯ ಮಧ್ವರು ಪ್ರತಿಪಾದಿಸಿದ ಹರಿಸರ್ವೋತ್ತಮತ್ವವನ್ನು ದೇಶದಾದ್ಯಂತ ಪ್ರಚುರಿಸುತ್ತಾ, ಪರವಾದಿಗಳನ್ನು ನಿಗ್ರಹ ಮಾಡಿ, ಭಕ್ತಾಭೀಷ್ಟಪ್ರದರಾಗಿ ನರಸೀಪುರದ ಪಾವಿತ್ರತೆಯನ್ನು ಅರಿತು ಇಲ್ಲಿಯೇ ಬೃಂದಾವನ ಪ್ರವೇಶ ಮಾಡಿರುತ್ತಾರೆ.

ಈ ನರಸೀಪುರ ಗ್ರಾಮದಲ್ಲಿ ಶೇಷಪ್ಪ ಮತ್ತು ಲಕ್ಷ್ಮೀದೇವಮ್ಮ ಎಂಬ ದಂಪತಿಗಳು ವಾಸವಾಗಿದ್ದರು. ಸಾತ್ವಿಕರೂ, ಸದಾಚಾರ ಸಂಪನ್ನರೂ ಆಗಿದ್ದ ಅವರು ದೈವದಲ್ಲಿ ಅತೀವ ಶ್ರದ್ಧೆಯುಳ್ಳವರಾಗಿದ್ದರು. ಭಾರದ್ವಾಜ

ಗೋತ್ರೋತ್ಪನ್ನರಾದ ಅವರು ಕುಂದಾಪುರದ ಶ್ರೀವ್ಯಾಸರಾಜ ಮಠದ ಅನುಯಾಯಿಗಳಾಗಿದ್ದರು. ಯದೃಚ್ಛಾಲಾಭ ಸಂತುಷ್ಟರಾಗಿ ಸಂತೃಪ್ತ ಜೀವನ ನಡೆಸುತ್ತಿದ್ದ ಆ ದಂಪತಿಗಳಿಗೆ ಸ್ತ್ರೀ ಸಂತಾನವಾಗಿತ್ತಾದರೂ ಪುತ್ರ ಸಂತಾನವಿರಲಿಲ್ಲ. ಅವರಿಗಿದ್ದ ಕೊರಗು ಅದೊಂದೇ. ವಂಶವನ್ನುದ್ಧರಿಸುವಂಥ ಪುತ್ರ ಸಂತಾನಕ್ಕಾಗಿ ದಂಪತಿಗಳು ಅನವರತ ಹಂಬಲಿಸುತ್ತಿದ್ದರು. ಪ್ರತಿನಿತ್ಯವೂ ಮನೆ ದೇವರಾದ ಶ್ರೀನಿವಾಸನಲ್ಲಿ ತಮ್ಮ ಅಂತರಂಗದ ತುಮುಲವನ್ನು ನಿವೇದಿಸಿಕೊಂಡು ಪರಿಪರಿಯಾಗಿ ಪ್ರಾರ್ಥಿಸುತ್ತಿದ್ದರು. ಅನೇಕ ದೇವತಾರೂಪಗಳಿಗೆ ಹರಕೆ ಹೊರತ್ತಿದ್ದರು. ಹಲವಾರು ವ್ರತ–ನೇಮಗಳನ್ನು ನಿಷ್ಠೆಯಿಂದ ಪಾಲಿಸುತ್ತಿದ್ದರು.

ಹೀಗಿರಲು ಒಮ್ಮೆ ಅವರಿಗೆ ತಮ್ಮ ಸಂಕಲ್ಪ ಸಿದ್ಧಿಗಾಗಿ ದೊಡ್ಡಬಳ್ಳಾಪುರದ ಹತ್ತಿರವಿರುವ ಸುಬ್ರಹ್ಮಣ್ಯ ಕ್ಷೇತ್ರವೆಂದು ಹೆಸರಾದ ಘಾಟಿಗೆ ತೆರಳಿ ಅಲ್ಲಿ ಶ್ರೀಸುಬ್ರಹ್ಮಣ್ಯ ಸ್ವಾಮಿಯನ್ನು ಸೇವಿಸುವ ಅಪೇಕ್ಷೆಯುಂಟಾಯಿತು. ಇದನ್ನು ಪರಮಾತ್ಮನ ಪ್ರೇರಣೆಯೆಂದೇ ಭಾವಿಸಿದ ದಂಪತಿಗಳು ತಡಮಾಡದೆ ಘಾಟಿ ಕ್ಷೇತ್ರಕ್ಕೆ ಪ್ರಯಾಣ ಮಾಡಿದರು. ಕ್ಷೇತ್ರಪ್ರಭುವಾದ ಶ್ರೀಸುಬ್ರಹ್ಮಣ್ಯ ಸ್ವಾಮಿಯನ್ನು ಸದೃಢವಾಗಿ ನಂಬಿ ಅನೇಕ ಕಠಿಣತರ ಸೇವಾವ್ರತಗಳನ್ನು ಕೈಗೊಂಡರು. ಸ್ವಾಮಿಯ ಚರಣ ಕಮಲಗಳನ್ನು ಹೃನ್ಮಂದಿರದಲ್ಲಿ ಪ್ರತಿಷ್ಠಾಪಿಸಿಕೊಂಡು ಸತ್ಪುತ್ರನೊಬ್ಬನನ್ನು ಕರುಣಿಸುವಂತೆ ಅಹರ್ನಿಶಿ ಬೇಡುತ್ತಿದ್ದರು. ಕೆಲವು ದಿವಸಗಳ ಸೇವೆಯ ನಂತರ ಕರುಣಾಮೂರ್ತಿಯೂ, ಶ್ರೀಸುಬ್ರಹ್ಮಣ್ಯ ಸ್ವಾಮಿಯ ಅಂತರ್ಗತನೂ ಆದ ಶ್ರೀಸಂಕರ್ಷಣರೂಪಿ ಪರಮಾತ್ಮನ ಕೃಪೆ ದಂಪತಿಗಳ ಮೇಲಾಯಿತು. ಶುಭಸೂಚನೆಗಳಾದವು. ತಮ್ಮ ವಂಶಕ್ಕೆ ಕೀರ್ತಿಯನ್ನು ತಂದು ಕೊಡುವ ಸತ್ಪುತ್ರನೊಬ್ಬನ ಆಗಮನದ ಅಭಯವಾಣಿ ಅಂತರಂಗದಲ್ಲೇ ಮೊಳಗಿತು. ಇದರಿಂದ ಪರಮ ಸಂತುಷ್ಟರಾದ ದಂಪತಿಗಳು ಘಾಟಿ ಕ್ಷೇತ್ರದಲ್ಲಿ ಕೈಗೊಂಡ ಸೇವಾವ್ರತಗಳನ್ನು ಪೂರ್ಣಗೊಳಿಸಿ ತಮ್ಮ ಸ್ವಗ್ರಾಮ ನರಸೀಪುರಕ್ಕೆ ಮರಳಿಬಂದರು. ಊರಿಗೆ ಬಂದ ಕೆಲವು ತಿಂಗಳುಗಳಲ್ಲಿಯೇ ಶೇಷಪ್ಪನವರ ಧರ್ಮಪತ್ನಿಯಾದ ಲಕ್ಷ್ಮೀದೇವಮ್ಮನವರು ಗರ್ಭವತಿ ಯಾದರು. ಅವತಾರ ಪುರುಷನನ್ನು ಒಡಲಿನಲ್ಲಿ ಹೊತ್ತ ಸಂಕೇತವೋ ಎನ್ನುವಂತೆ ಆ ಸಾಧ್ವಿಯ ಮುಖ ಕಮಲ ಅಪೂರ್ವ ತೇಜಸ್ಸಿನಿಂದ ಕಂಗೊಳಿಸ

ತೊಡಗಿತು. ಸೀಮಂತಾದಿ ಸಂಸ್ಕಾರಗಳು ಶಾಸ್ತ್ರೋಕ್ತವಾಗಿ ನಡೆದವು. ಮಂಗಳಕರ ಮುಹೂರ್ತ ಹತ್ತಿರವಾಯಿತು. ಶಾಲಿವಾಹನ ಶಕ 1787 ಅಂದರೆ ಕ್ರಿ.ಶ. 1865ರ ಕ್ರೋಧನ ಸಂವತ್ಸರದ ಶ್ರಾವಣ ಶುದ್ಧ ಚತುರ್ಥಿ ಭಾನುವಾರ ದಂದು ಶುದ್ಧ ಚಂದ್ರಮನಂತೆ ಬೆಳಗುತ್ತಿದ್ದ ಮುದ್ದಾದ ಗಂಡು ಮಗುವಿಗೆ ಲಕ್ಷ್ಮೀದೇವಮ್ಮನವರು ಜನ್ಮನೀಡಿದರು.

ಪುತ್ರ ಜನನದಿಂದ ದಂಪತಿಗಳಿಗೆ ಮಹದಾನಂದವಾಯಿತು. ಬಹುಕಾಲದ ತಮ್ಮ ಹಂಬಲವನ್ನು ತುಂಬಿದ ಸ್ವಾಮಿಯ ಕಾರುಣ್ಯವನ್ನು ಅವರು ಹೃದಯ ತುಂಬಿ ಕೊಂಡಾಡಿದರು. ತಮ್ಮ ಕೃತಜ್ಞತೆಯನ್ನು ಸೂಚಿಸಲು, ಶ್ರೀಸುಬ್ರಹ್ಮಣ್ಯ ಸ್ವಾಮಿಯ ಅನುಗ್ರಹ ವಿಶೇಷದಿಂದ ನಾಗಚುರ್ಥಿಯಂದೇ ಜನ್ಮತಾಳಿದ ತಮ್ಮ ಮಗುವಿಗೆ ಆತನ ಕೃಪೆ ತುಂಬಿಬರಲೆಂದು "ಸುಬ್ಬರಾಯ" ಎಂದೇ ಹೆಸರಿಟ್ಟರು. ನೆಂಟರಿಷ್ಟರನ್ನೆಲ್ಲಾ ಆಹ್ವಾನಿಸಿ ವೈಭವದಿಂದ ತಮ್ಮ ಸ್ವಗ್ರಾಮದಲ್ಲಿ ನಾಮಕರಣೋತ್ಸವವನ್ನು ನೆರವೇರಿಸಿದರು.

ಸುಬ್ರಹ್ಮಣ್ಯನ ವರಪ್ರಸಾದಿಂದ ಜನಿಸಿದ ಸುಬ್ಬರಾಯ ದಿನದಿಂದ ದಿನಕ್ಕೆ, ವಾರದಿಂದ ವಾರಕ್ಕೆ ಬೆಳೆಯತೊಡಗಿದ. ತಿದ್ದಿದ ಚಂದನದ ಗೊಂಬೆಯಂತೆ, ರುದ್ರನಂದನನಾದ ಕುಮಾರಸ್ವಾಮಿಯಂತೆ ಬಲು ಮುದ್ದಾಗಿದ್ದ ಅವನ ಬಾಲಲೀಲೆಗಳು ಮೋಹಕವಾಗಿದ್ದವು. ಆರೋಗ್ಯ ಸೂಸುವ ಅವನ ಪುಷ್ಟ ಶರೀರ ಮುಂದೆ ದೃಢಾಂಗನಾಗಿ ರೂಪುಗಳ್ಳುವ ಸೂಚನೆ ನೀಡಿದರೆ; ಅವನ ಹೊಳಪು ಕಣ್ಣುಗಳು ಮತ್ತು ದೈವೀಕಳೆಯಿಂದ ಪ್ರಜ್ವಲಿಸುತ್ತಿದ್ದ ಅವನ ಪ್ರಶಾಂತ ವದನ ಮುಂದೆ ಮಹಾಪುರುಷನಾಗಿ ಮಾರ್ಪಡುವ ಲಕ್ಷಣಗಳನ್ನು ಸಾರುತ್ತಿದ್ದವು. ಒಮ್ಮೆ ಮಗು ತೊಟ್ಟಿಲಲ್ಲಿ ಶಾಂತವಾಗಿ ಮಲಗಿ ನಿದ್ರಿಸುತ್ತಿದ್ದಾಗ ತೊಟ್ಟಿಲು ಕಟ್ಟಿದ ಜಂತೆಯ ಮೇಲೆ ಘಟಸರ್ಪವೊಂದು ಹೆಡೆಯಾಡಿಸುತ್ತಿದ್ದು ದ್ದನ್ನು ಕಣ್ಣಾರೆ ಕಂಡ ಶೇಷಪ್ಪ-ಲಕ್ಷ್ಮೀದೇವಮ್ಮ ದಂಪತಿಗಳು ಭಯವಿಹ್ವಲ ಗೊಂಡರಾದರೂ ಆ ಘಟಸರ್ಪ ಕೂಸಿಗೆ ಏನೂ ಮಾಡದೆ ಅಲ್ಲಿಂದ ಶಾಂತ ವಾಗಿ ಹೊರಟು ಹೋಗಿ ಅದೃಶ್ಯವಾಗಿದ್ದನ್ನು ನೋಡಿ ಶ್ರೀಸುಬ್ರಹ್ಮಣ್ಯೇಶ್ವರನ ವರ ಪ್ರಸಾದದಿಂದ ಹುಟ್ಟಿದ ತಮ್ಮ ಮಗ ಸಾಮಾನ್ಯನಲ್ಲವೆಂದೂ ಮುಂದೆ ಮಹತ್ಕಾರ್ಯ ಸಾಧಿಸುವ ಅಸಾಮಾನ್ಯ ವ್ಯಕ್ತಿತ್ವವುಳ್ಳವನಾಗುವನೆಂದೂ ಅವರಿಗೆ ನಂಬಿಕೆಯುಂಟಾಯಿತು.

ಬಾಲಕ ಸುಬ್ಬರಾಯನಿಗೆ ಆಗ ಕುಂದಾಪುರ ಶ್ರೀವ್ಯಾಸರಾಜ ಸಂಸ್ಥಾನಾಧೀಶರಾಗಿದ್ದ ಶ್ರೀಲಕ್ಷ್ಮೀಪ್ರಿಯತೀರ್ಥರಿಂದ, ಆ ಸಂದರ್ಭದಲ್ಲಿ ಶ್ರೀಗಳವರು ಬಿಡಾರ ಮಾಡಿದ್ದ ಶಿವಮೊಗ್ಗ ಬಳಿಯ ಕೂಡಲಿಗಿ ಎಂಬ ಕ್ಷೇತ್ರದಲ್ಲಿ ಅಕ್ಷರಾಭ್ಯಾಸವಾಯಿತು. ಅಲೌಕಿಕ ಕಾಂತಿಯಿಂದ ಶೋಭಿಸುತ್ತಿದ್ದ ಬಾಲಕನ ಕರಪಿಡಿದು ಶ್ರೀಪಾದಂಗಳವರೇ ವಾತ್ಸಲ್ಯದಿಂದ "ಓಂ"ಕಾರವನ್ನು ತಿದ್ದಿಸಿದರು. ಅವನ ಎಂಟನೇ ವರ್ಷಕ್ಕೆ ಸರಿಯಾಗಿ ಬ್ರಹ್ಮೋಪದೇಶವೂ ಸಹ ಕುಲಗುರುಗಳಾದ ಶ್ರೀಲಕ್ಷ್ಮೀಪ್ರಿಯತೀರ್ಥರಿಂದಲೇ ನಡೆಯಿತು. ಬಾಲಕನ ಚುರುಕುತನ, ಕುಶಾಗ್ರ ಬುದ್ಧಿ, ಗಂಭೀರ ಸ್ವಭಾವ ಮುಂತಾದವುಗಳನ್ನು ಕಂಡು ಸಂತೋಷಿಸಿ ಅವನಿಗೆ ಸಂಧ್ಯೋಪಾಸನೆ, ದೇವರಪೂಜೆ ಮುಂತಾದ ನಿತ್ಯ ಕ್ರಮಗಳನ್ನು ತಿಳಿಸಿಕೊಟ್ಟರಲ್ಲದೆ ತಮ್ಮೊಂದಿಗೆ ಅವನನ್ನು ಬೇಲೂರು, ಚೆನ್ನಪಟ್ಟಣ, ಅಬ್ಬೂರು ಮುಂತಾದ ಸ್ಥಳಗಳಿಗೆ ಕರೆದುಕೊಂಡು ಹೋಗಿ ಕ್ಷೇತ್ರಮೂರ್ತಿಗಳ ದರ್ಶನ ಮಾಡಿಸಿದರು. ಹೇಳಿಕೊಡುವ ಪಾಠಗಳನ್ನು ಕಲಿಯುತ್ತಾ ಪ್ರತಿನಿತ್ಯ ಶ್ರದ್ಧಾಭಕ್ತಿಗಳಿಂದ ಗುರುಸೇವೆಯನ್ನು ಮಾಡುತ್ತಿದ್ದ ಸುಬ್ಬರಾಯನ ಮಸ್ತಕದ ಮೇಲೆ ಶ್ರೀಗೋಪಾಲ ಕೃಷ್ಣೋಪಾಸಕರಾದ ಶ್ರೀಪಾದಂಗಳವರು ಅನುಗ್ರಹ ಪೂರ್ವಕವಾಗಿ ತಮ್ಮ ದಿವ್ಯ ಹಸ್ತವನ್ನಿಟ್ಟು ಹೃದಯ ತುಂಬಿ ಆಶೀರ್ವದಿಸಿದರು.

ಸುಬ್ಬರಾಯನ ಪ್ರಾಥಮಿಕ ಹಂತದ ವಿದ್ಯಾಭ್ಯಾಸ ಸ್ವಗ್ರಾಮವಾದ ನರಸೀಪುರದಲ್ಲಿಯೇ ನಡೆಯಿತು. ಶಾಲೆಯಲ್ಲಿ ಸುಬ್ಬರಾಯನೇ ತನ್ನ ಸಹಪಾಠಿಗಳ ತಂಡಕ್ಕೆ ನಾಯಕನಾಗಿದ್ದ. ದೃಢಕಾಯನಾಗಿದ್ದುದ್ದರಿಂದ ಕ್ರೀಡಾ ವಿನೋದಗಳಲ್ಲಿ ಅವನನ್ನು ಮೀರಿಸುವವರೇ ಇರಲಿಲ್ಲ. ಕುಶಾಗ್ರಮತಿಯಾದ ಸುಬ್ಬರಾಯ ಓದಿನಲ್ಲಿಯೂ ಮುಂದಿದ್ದ. ಅವನ ವಿದೇಯತೆ, ಶಾಂತ ಸ್ವಾಭಾವ ಮತ್ತು ಆತ್ಮವಿಶ್ವಾಸಗಳನ್ನು ಕಂಡು ಶಾಲೆಯ ಉಪಾಧ್ಯಾಯರೆಲ್ಲರೂ ತಮ್ಮ ಮೆಚ್ಚುಗೆ ವ್ಯಕ್ತಪಡಿಸಿದರು.

## ಮದುವೆ – ಅವಧೂತಚರ್ಯೆ

ತಕ್ಕಮಟ್ಟಿಗೆ ಲೌಕಿಕ ಶಿಕ್ಷಣವನ್ನು ಪಡೆದು ಕಿಶೋರಾವಸ್ಥೆಗೆ ಕಾಲಿಡುತ್ತಿದ್ದ ಸುಬ್ಬರಾಯನಿಗೆ ಅವನ ತಂದೆ ತಾಯಿಗಳು ಆಗಿನ ಕಾಲದ ಪದ್ಧತಿಯಂತೆ ಚಿಕ್ಕ ವಯಸ್ಸಿಗೇ ಮದುವೆ ಮಾಡಿದರು. ಮದುವೆಯಾದಾಗ ಹುಡುಗನಿಗೆ ಸುಮಾರು

ಹದಿನಾಲ್ಕು-ಹದಿನೈದು ವರ್ಷಗಳಿರಬಹುದು. ಹುಡುಗಿಗೆ ಏಳು-ಎಂಟು ವರ್ಷ ವಯಸ್ಸಿರಬೇಕು. ಹುಡುಗಿಯ ಹೆಸರು ಅಚ್ಚಮ್ಮ. ಸುಬ್ಬರಾಯನ ಹಿರಿಯರಿಗೆ ಸಮೀಪ ಬಂಧುಗಳೇ ಆಗಿದ್ದ ಕನ್ಯೆಯ ಸ್ಥಳವೂ ಸಹ ನರಸೀಪುರವೇ. ಸುಬ್ಬರಾಯನ ಮನೆಯ ಎದುರಿನ ಸಾಲಿನಲ್ಲಿಯೇ ಅಚ್ಚಮ್ಮನ ಮನೆಯೂ ಇತ್ತು.

"ಮದುವೆ" ಎಂದರೆ ಏನು ಎಂದು ತಿಳಿದುಕೊಳ್ಳಲಾರದಂತಹ ವಯಸ್ಸಿನಲ್ಲಿ ಸುಬ್ಬರಾಯ ಮತ್ತು ಅಚ್ಚಮ್ಮ ದಂಪತಿಗಳಾದರು. ಹಳ್ಳಿಗಳಲ್ಲಿ ಶಿಕ್ಷಣದ ವ್ಯವಸ್ಥೆ ಅಷ್ಟೊಂದು ಸಮರ್ಪಕವಾಗಿರದಿದ್ದ ಆ ಕಾಲದಲ್ಲಿ ಸುಬ್ಬರಾಯನ ಕೈಹಿಡಿದ ಅಚ್ಚಮ್ಮನಿಗೆ ಹೆಚ್ಚಿನ ಶಿಕ್ಷಣ ಭಾಗ್ಯ ದೊರಕಿರಲಾರದೆಂದೇ ತೋರುತ್ತದೆ. ಮದುವೆಯಾದ ನಂತರ ಸುಬ್ಬರಾಯ ಕೆಲವು ದಿವಸ ತನ್ನ ಹಳ್ಳಿಯಲ್ಲಿಯೇ ಇದ್ದ ಪುಟ್ಟ ಪಾಠಶಾಲೆಯಲ್ಲಿ ಮಕ್ಕಳಿಗೆ ಪಾಠ ಹೇಳಿಕೊಡುತ್ತಿದ್ದ. ಆದರೆ ಅವನ ಮನಸ್ಸು ಸದಾ ಯಾವುದೋ ಅಧ್ಯಾತ್ಮಿಕ ಪ್ರಪಂಚದಲ್ಲಿ ವಿಹರಿಸಲು ಬಯಸುತ್ತಿತ್ತು. ಮಗನಲ್ಲಿದ್ದ ಧಾರ್ಮಿಕ ಅಭಿರುಚಿಯನ್ನು ಗುರುತಿಸಿದ ಶೇಷಪ್ಪನವರು ಸುಬ್ಬರಾಯನಿಗೆ ಶಾಸ್ತ್ರ ಶಿಕ್ಷಣವನ್ನು ಕೊಡಿಸಲು ನಿರ್ಧರಿಸಿದರು. ಬೆಂಗಳೂರಿನಲ್ಲಿ ವಾಸವಾಗಿದ್ದ ಪ್ರಸಿದ್ಧ ಪಂಡಿತರಾದ ಶ್ರೀಚಿಂಚೋಳಿ ವೆಂಕಣ್ಣಾಚಾರ್ಯರ ಬಳಿ ಶಾಸ್ತ್ರ ವ್ಯಾಸಂಗದ ಏರ್ಪಾಟಾಯಿತು. ಆಚಾರ್ಯರ ಬಳಿ ಶಾಂತಿಪಾಠ ಹಾಕಿ ಅಧ್ಯಯನವನ್ನು ಕ್ರಮಬದ್ಧವಾಗಿ ಪ್ರಾರಂಭಿಸಿದ ಸುಬ್ಬರಾಯನಿಗೆ ಶಾಸ್ತ್ರವ್ಯಾಸಂಗ ತುಂಬಾ ಇಷ್ಟವಾಯಿತು. ಚಿಂಚೋಳಿ ಆಚಾರ್ಯರ ಬಳಿ ಶ್ರೀನಾರಾಯಣ ಪಂಡಿತಾ ಚಾರ್ಯರಿಂದ ವಿರಚಿತವಾದ ಶ್ರೀಸುಮಧ್ವವಿಜಯದ ಅಧ್ಯಯನವನ್ನು ಪ್ರಾರಂಭಿಸಿ, ಅದನ್ನು ನಿಷ್ಠೆಯಿಂದ ಅಭ್ಯಸಿಸಿ ಹೃದ್ಗತಮಾಡಿಕೊಂಡ.

ಸುಬ್ಬರಾಯನ ಗುರುಭಕ್ತಿ ಅನುಪಮವಾದದ್ದು. ಅವನು ಪ್ರತಿನಿತ್ಯ ಗುರುಗಳ ಶುಶ್ರೂಷೆ ಮಾಡುತ್ತಾ ಶಾಸ್ತ್ರ ಪಾಠಗಳನ್ನು ನಿಷ್ಠೆಯಿಂದ ಕಲಿಯುತ್ತಿದ್ದ. ನಿತ್ಯ ಸುಮಧ್ವ ವಿಜಯ ಪಠಣೆಯಿಂದ ಮಧ್ವರಾಯರ ಕರುಣೆಯನ್ನು ಸಂಪಾದಿಸಿದ ಸುಬ್ಬರಾಯನ ಮುಖದಲ್ಲಿ ಅಪೂರ್ವ ತೇಜಸ್ಸು ಪ್ರಕಟಗೊಂಡಿತು. ಜೀವನ ನಿರ್ವಹಣೆಗಾಗಿ ಮಧುಕರಿ ವೃತ್ತಿಯನ್ನು ಕೈಗೊಂಡು ಸುಬ್ಬರಾಯ ಸರ್ವಜ್ಞಾಚಾರ್ಯರ ಸರ್ವಮೂಲ ಗ್ರಂಥಗಳೆಲ್ಲವನ್ನೂ ಆಚಾರ್ಯರ ಬಳಿ

ಅಧ್ಯಯನ ಮಾಡಿದ. ಹರಿಗುರುಗಳಲ್ಲಿ ಸುಬ್ಬರಾಯನಿಗಿದ್ದ ಭಕ್ತಿಯನ್ನೂ, ಪಾಠ ಪ್ರವಚನಗಳಲ್ಲಿ ಅವನು ತೋರುತ್ತಿದ್ದ ಆಸಕ್ತಿಯನ್ನೂ ಕಂಡು ಶ್ರೀ ವೆಂಕಣ್ಣಾಚಾರ್ಯರಿಗೆ ತುಂಬಾ ಸಂತೋಷವಾಯಿತು. ಅಪಾರ ಪರಿಶ್ರಮದಿಂದ ತಾವು ಗಳಿಸಿದ್ದ ವೈದಿಕ ವಿದ್ಯೆಯೆಲ್ಲವನ್ನೂ ಅವರು ತುಂಬು ಹೃದಯದಿಂದ ಶಿಷ್ಯನಿಗೆ ಧಾರೆ ಎರೆದರು.

ತನ್ನ ಬಿಡುವಿನ ವೇಳೆಯಲ್ಲಿ ಸುಬ್ಬರಾಯ ಬೆಂಗಳೂರಿನಲ್ಲಿ ಆಗಾಗ ನಡೆಯುತ್ತಿದ್ದ ಹರಿಕಥೆ, ಭಜನೆ, ಏಕಾದಶಿ ಜಾಗರಣೆ ಮುಂತಾದ ಕಡೆ ಹೋಗುತ್ತಿದ್ದುದ್ದರಿಂದ ಅವನಿಗೆ ಹರಿದಾಸ ಸಾಹಿತ್ಯದ ಪರಿಚಯವೂ ಚೆನ್ನಾಗಿ ಆಯಿತು. ಪುರಂದರದಾಸರು, ಕನಕದಾಸರು, ವಿಜಯದಾಸರು ಮುಂತಾದ ಅನೇಕ ಹರಿದಾಸ ಶ್ರೇಷ್ಠರ ಜೀವನ ಚರಿತ್ರೆಗಳನ್ನು ಅವನು ಶ್ರದ್ಧೆಯಿಂದ ಓದುತ್ತಿದ್ದ. ಇದರಿಂದ ಸುಬ್ಬರಾಯನಿಗೆ ಹರಿದಾಸ ಪರಂಪರೆಯಲ್ಲಿ ಪೂಜ್ಯ ಭಾವನೆಯುಂಟಾಗಿತ್ತು. ಅವನು ಹರಿದಾಸ ಸಾಹಿತ್ಯವನ್ನು ಪ್ರತಿನಿತ್ಯವೂ ನಿಷ್ಠೆಯಿಂದ ಪಠಿಸುತ್ತಿದ್ದ. ಅವನ ಕಂಠವೂ ಸುಶ್ರಾವ್ಯವಾಗಿತ್ತು. ಹಾಗಾಗಿ ಹರಿದಾಸರ ಹಲವಾರು ಕೀರ್ತನೆ ಸುಳಾದಿಗಳು ಅವನಿಗೆ ಬಾಯಿಪಾಠ ವಾಗಿದ್ದವು. ಶ್ರೀಜಗನ್ನಾಥದಾಸರಾಯರು ರಚಿಸಿರುವ ಮೋಕ್ಷಪ್ರದ ಗ್ರಂಥವೆಂದು ಹೆಸರಾದ 'ಶ್ರೀಹರಿಕಥಾಮೃತಸಾರ'ದಲ್ಲಿ ಸುಬ್ಬರಾಯನಿಗೆ ಅತೀವ ಆಸಕ್ತಿಯಿತ್ತು. ಶಾಸ್ತ್ರಾಭ್ಯಾಸ ಮಾಡಿದ್ದನಾದ್ದರಿಂದ ದಾಸರಾಯರ ತತ್ವಭರಿತ ನುಡಿಗಟ್ಟುಗಳು ಅವನ ಮೇಲೆ ಮೋಡಿಯನ್ನೇ ಮಾಡಿಬಿಟ್ಟಿದ್ದವು. ಹರಿಕಥಾಮೃತಸಾರದ ಪ್ರತಿಯೊಂದು ಸಂಧಿಯನ್ನೂ ಶ್ರದ್ಧೆಯಿಂದ ಅಭ್ಯಸಿಸಿ ಹೃದ್ಗತ ಮಾಡಿಕೊಂಡಿದ್ದನಲ್ಲದೆ ಅವುಗಳನ್ನು ಸುಶ್ರಾವ್ಯವಾಗಿ ವಾಚಿಸಿ ಮನಮುಟ್ಟುವಂತೆ ಪ್ರವಚನ ಮಾಡುವ ಕಲೆಯನ್ನೂ ಸಹ ರೂಢಿಸಿಕೊಂಡಿದ್ದ.

ವಿದ್ವನ್ಮಣಿಗಳಾಗಿದ್ದ ಶ್ರೀಚಿಂಚೋಳಿ ವೆಂಕಣ್ಣಾಚಾರ್ಯರಲ್ಲಿ ಶಾಸ್ತ್ರ ವ್ಯಾಸಂಗವನ್ನು ಪೂರ್ಣಗೊಳಿಸಿ ಅವರ ಆಶೀರ್ವಾದವನ್ನು ಪಡೆದು ಸ್ವಗ್ರಾಮ ವಾದ ನರಸೀಪುರಕ್ಕೆ ಹಿಂದಿರುಗಿದ ಸುಬ್ಬರಾಯ ಆಚಾರ್ಯರನ್ನು ನರಸೀಪುರಕ್ಕೇ ಕರೆಸಿಕೊಂಡು ವಿಜೃಂಭಣೆಯಿಂದ ಮಂಗಳ ಮಹೋತ್ಸವವನ್ನು ಏರ್ಪಡಿಸಿ ಗುರುಗಳಿಗೆ ಯಥೇಚ್ಛ ದಾನ-ದಕ್ಷಿಣೆಗಳನ್ನು ನೀಡಿ ಅವರನ್ನು ತೃಪ್ತಿಪಡಿಸಿದ. ಶಾಸ್ತ್ರವೇತ್ತನಾಗಿ ಸ್ವಗ್ರಾಮಕ್ಕೆ ಹಿಂದಿರುಗಿದ ಸಂದರ್ಭದಲ್ಲಿ

ಸುಬ್ಬರಾಯನಿಗೆ ಸುಮಾರು ಇಪ್ಪತ್ತೆರಡು-ಇಪ್ಪತ್ಮೂರು ವರ್ಷಗಳಾಗಿರಬಹುದು. ಆ ಹೊತ್ತಿಗೆ ಅವನಲ್ಲಿ ಅನೇಕ ಬದಲಾವಣೆಗಳಾಗಿದ್ದವು. ಹುಟ್ಟಿನಿಂದಲೇ ದೃಢಾಂಗನಾಗಿದ್ದ ಅವನಲ್ಲಿ ತಾರುಣ್ಯದ ಕಾಂತಿ ಮತ್ತು ವಿದ್ವತ್ತೇಜಸ್ಸುಗಳು ಒಡಮೂಡಿದ್ದವು. ವಯಸ್ಸಿಗೆ ಮೀರಿದ ವೈರಾಗ್ಯ ಭಾವನೆ ಮತ್ತು ದೈವಶ್ರದ್ಧೆ ಅವನಲ್ಲಿ ಮನೆ ಮಾಡಿದ್ದವು. ಆದರೆ ಸುಬ್ಬರಾಯ ಸದಾ ಏಕಾಂತದಲ್ಲಿರಲು ಬಯಸುತ್ತಿದ್ದ. ಅಧ್ಯಾತ್ಮಿಕ ಚಿಂತನೆಯಲ್ಲಿ ತೊಡಗಿ ಅಂತರಂಗದಲ್ಲೇ ಅಪೂರ್ವ ಆನಂದವನ್ನು ಅನುಭವಿಸುತ್ತಿದ್ದ.

**"ಹರಿಯ ವ್ಯಾಪ್ತಿಯ ಕಂಡು ನೀ। ಗಿರಿ ಗುಹೆಯಲಿ ಚರಿಸುತಾ**
**ತೊರೆದು ಮಮತೆಯ ಚರಿಸಿದೆ। ಕರೆಕರೆಯ ಸಂಸಾರದಿ॥"**

ಎಂದು ದಾಸರ ಶಿಷ್ಯರಾದ ಶ್ರೀಗುರು ಗೋವಿಂದದಾಸರು ತಮ್ಮ ಒಂದು ಕೀರ್ತನೆಯಲಿ ವರ್ಣಿಸಿರುವಂತೆ ಸುಬ್ಬರಾಯ ಹರಿಯ ವ್ಯಾಪ್ತಿಯನ್ನು ಎಲ್ಲಾ ಠಾವಿನಲ್ಲೂ ಕಂಡುಕೊಂಡು ಧ್ಯಾನಾಸಕ್ತನಾಗುತ್ತಿದ್ದ ಸಂಸಾರದಲ್ಲಿ ಹೆಚ್ಚು ಆಸಕ್ತಿವಹಿಸದೆ ಸದಾ ಒಬ್ಬಂಟಿಯಾಗಿರಲು ಅಪೇಕ್ಷಿಸುತ್ತಿದ್ದ. ಒಮ್ಮೊಮ್ಮೆ ಅವನಿಗೆ ಮನೆಯಲ್ಲಿ ಹರಿಧ್ಯಾನಕ್ಕೆ ಏಕಾಂತ ಸ್ಥಳ ದೊರಕದಿದ್ದಾಗ ನರಸೀಪುರದ ಸುತ್ತಮುತ್ತಲಿರುವ ದೇವರಾಯನದುರ್ಗ, ರಾಮದೇವರ ಬೆಟ್ಟ, ಶಿವಗಂಗೆ ಮುಂತಾದ ಬೆಟ್ಟಗಳಿಗೆ ಹೋಗಿ ಅಲ್ಲಿನ ಗುಹೆಗಳಲ್ಲಿ ಧ್ಯಾನಾಸಕ್ತನಾಗಿ ದಿನಗಟ್ಟಲೆ, ವಾರಗಟ್ಟಲೆ ಇದ್ದುಬಿಡುತ್ತಿದ್ದ. ತಂದೆ ತಾಯಿಗಳು ಅವರಿವರು ಕೊಟ್ಟ ಸುಳಿವಿನ ಮೇರೆಗೆ ಮಗನನ್ನು ಹುಡುಕಿ ಮನೆಗೆ ಕರೆದುಕೊಂಡು ಬಂದರೆ ಒಂದೆರೆಡು ದಿವಸ ಮಾತ್ರ ಮನೆಯಲ್ಲಿದ್ದು ಪುನಃ ಯಾವ ಮಾಯದಲ್ಲೋ ಬೆಟ್ಟಗುಡ್ಡಗಳ ಏಕಾಂತ ಸ್ಥಳವನ್ನರಿಸಿ ಹೋಗಿ ಬಿಡುತ್ತಿದ್ದ. ಅವಧೂತನಂತೆ ಕೌಪೀನಧಾರಿ ಯಾಗಿ, ದೇಹಮೋಹವನ್ನು ಬದಿಗೊತ್ತಿ ಅರಣ್ಯಗಳಲ್ಲಿ ದೊರಕುವ ಹಣ್ಣು-ಹಂಪಲುಗಳಿಂದ ದೇಹ ಪೋಷಣೆಯನ್ನು ಮಾಡಿಕೊಳ್ಳುತ್ತಾ ಯೋಗ ಸಾಧನೆಯಲ್ಲಿ ನಿರತನಾಗುತ್ತಿದ್ದ. ತನ್ನ ತಲೆಗೂದಲನ್ನು ಆಲದ ಮರದ ಹಾಲಿನಿಂದ ಜಟೆಗಳಾಗಿ ಪರಿವರ್ತಿಸಿ, ಮೈ ಕೈಗಳಿಗೆ ಭಸ್ಮವನ್ನು ಲೇಪಿಸಿಕೊಂಡು "ಜೈ ಭಗವಾನ್" ಎಂದು ಕೂಗುತ್ತಾ ತಮ್ಮ ಹಳ್ಳಿಯಾದ ನರಸೀಪುರದಲ್ಲಿಯೇ ಅನೇಕ ಬಾರಿ ಗುರುತು ಸಿಗದಂತೆ ಬಂದು ಹೋಗುತ್ತಿದ್ದನಂತೆ.

## ಸಂಸಾರ ಜೀವನ

ಸರಿಯಾಗಿ ಮನೆಗೆ ಬಾರದೆ ವಿಚಿತ್ರವಾದ ವೇಷ ಧರಿಸಿ ಕಾಡುಮೇಡುಗಳನ್ನು ಅಲೆಯುತ್ತಿದ್ದ ಸುಬ್ಬರಾಯರನ್ನು ಕಂಡು ತಂದೆ-ತಾಯಿಗಳಿಗೆ ತೀವ್ರ ವ್ಯಾಕುಲವಾಯಿತು. ಹೀಗೇ ಬಿಟ್ಟರೆ ಇರುವ ಒಬ್ಬನೇ ಮಗ ಕೈಬಿಟ್ಟು ಹೋಗಬಹುದೆಂದು ಅವರು ಪರಿತಪಿಸಿದರು. ವಿದ್ಯಾವಂತನೂ, ಪ್ರತಿಭಾನ್ವಿತನೂ ಆದ ಆತನ ಬದುಕು ಹೀಗೆ ಗೊತ್ತು ಗುರಿಯಿಲ್ಲದೆ ವ್ಯರ್ಥಗೊಳ್ಳಲು ಬಿಡಬಾರದೆಂದು ಅವರಿಗೆ ಅನ್ನಿಸಿತು. ದೈವೋನ್ಮಾದಿನಿಯಂತಿರುವ ಅವನನ್ನು ಹೇಗಾದರೂ ಮಾಡಿ ಮನೆಗೆ ಕರೆತಂದು ಸಂಸಾರಕ್ಕೆ ಹಚ್ಚಬೇಕೆಂದು ಅವರು ಸಂಕಲ್ಪಿಸಿದರು. ಆ ಹೊತ್ತಿಗೆ ಸುಬ್ಬರಾಯರ ಧರ್ಮಪತ್ನಿಯಾದ ಅಚ್ಚಮ್ಮನೂ ಸಹ ಪ್ರವೃದ್ಧಮಾನಕ್ಕೆ ಬಂದಿದ್ದು ಸಂಸಾರ ನಿರ್ವಹಣೆಗೆ ಅರ್ಹಳಾಗಿದ್ದಳು.

ತಂದೆ ತಾಯಿಗಳು ಹೆಚ್ಚು ತಡಮಾಡಲಿಲ್ಲ. ಒಮ್ಮೆ ಮಗ ಮನೆಗೆ ಬಂದಿದ್ದಾಗ ಉಪಾಯವಾಗಿ ಅವನ ಮನಸ್ಸನ್ನು ಒಲಿಸಿಕೊಂಡು ತಿಳಿ ಹೇಳಿದರು. ನಮಗಿರುವವನು ನೀನೊಬ್ಬನೇ ಮಗ. ನೀನೇ ಹೀಗೆ ಕಾಡು ಮೇಡುಗಳ ಪಾಲಾಗಿ ಅಲೆಧರೆ ಈ ಮುಪ್ಪಿನಲ್ಲಿ ನಮ್ಮ ಪಾಡೇನೆಂದು ಅವರು ಕಣ್ಣಿನಲ್ಲಿ ನೀರು ತಂದುಕೊಂಡರು. ಆಗಿದ್ದು ಆಗಿ ಹೋಯಿತು. ಇನ್ನು ಮುಂದಾದರೂ ನಮ್ಮ ಕಣ್ಣೆದುರಿಗಿದ್ದು ಮನೆಯಲ್ಲೇ ಬೇಕಾದ ಸಾಧನೆ ಮಾಡಿಕೋ ನಾವು ಬೇಡವೆನ್ನುವವರಲ್ಲ. ಆದರೆ ನಮ್ಮ ವಂಶವನ್ನು ಉಳಿಸಿ, ಬೆಳೆಸುವ ಕರ್ತವ್ಯ ನಿನ್ನ ಮೇಲಿರುವುದನ್ನು ಮಾತ್ರ ಮರೆಯಬೇಡ ಎಂದು ಪರಿಪರಿಯಾಗಿ ಹೇಳಿ ಬೇಡಿಕೊಂಡರು. ಸೊಸೆ ಅಚ್ಚಮ್ಮ ದೊಡ್ಡವಳಾಗಿರುವ ವಿಷಯ ತಿಳಿಸಿ ಒಂದು ಶುಭ ದಿವಸದಲ್ಲಿ ನಿಷೇಕ ಮುಹೂರ್ತದ ಏರ್ಪಾಟು ಸಹ ಮಾಡಿದರು.

ಹೆತ್ತು, ಹೊತ್ತು, ಸಲಹಿದ ತಂದೆ ತಾಯಿಗಳ ಮನಸ್ಸನ್ನು ಹೆಚ್ಚು ನೋಯಿಸಬಾರದೆಂದು ಸುಬ್ಬರಾಯರಿಗನ್ನಿಸಿತು. ಅವರ ಮಾತಿನಂತೆಯೇ ತಮ್ಮ ಧರ್ಮಪತ್ನಿಯೊಂದಿಗೆ ಸಂಸಾರ ಜೀವನವನ್ನು ನಡೆಸಲು ಪ್ರಾರಂಭಿಸಿದರು. ಹೆಂಡತಿಯೊಂದಿಗೆ ಕ್ಲುಪ್ತಭೋಗದಲ್ಲಿ ನಿರತರಾಗಿದ್ದರೂ ಅವರ ಮನಸ್ಸು ಮಾತ್ರ

ಅಧ್ಯಾತ್ಮಿಕ ಭಾವನೆಗಳತ್ತಲೇ ತುಡಿಯುತ್ತಿತ್ತು. ಸುಬ್ಬರಾಯರನ್ನು ನೋಡಿದವರಿಗೆ ಅವರ ವರ್ತನೆ ವಿಚಿತ್ರವೆನ್ನಿಸುತ್ತಿತ್ತು. ಒಂದೊಂದು ಸಲ ಅವರು ಮನೆಯವ ರೊಂದಿಗೆ ಹೊಂದಿಕೊಂಡು ನಗುನಗುತ್ತಾ ಇರುತ್ತಿದ್ದರು. ಮತ್ತೊಂದು ಸಲ ಎಲ್ಲವನ್ನೂ ತೃಣೀಕರಿಸಿ ಏಕಾಂತವನ್ನು ಬಯಸುತ್ತಿದ್ದರು. ಏನೋ ಕನಸು ಕಂಡವರಂತೆ, ಯಾರೊಂದಿಗೋ ಮಾತನಾಡುತ್ತಿರುವಂತೆ, ಏನನ್ನೋ ಕನವರಿಸಿಕೊಳ್ಳುತ್ತಾ. ತಮಗೆ ತಾವೇ ನಗುತ್ತಾ, ತಮ್ಮಷ್ಟಕ್ಕೆ ಅಳುತ್ತಾ ಅನೇಕ ರಾತ್ರಿಗಳಂದು ನಿದ್ರೆಯನ್ನೂ ಮಾಡದೆ ಮೌನವಾಗಿದ್ದು ಬಿಡುತ್ತಿದ್ದರು. ಈ ವಿಷಯವನ್ನು ಅವರ ಪ್ರಶಿಷ್ಯರಾದ ಶ್ರೀತಂದೆ ವೆಂಕಟೇಶದಾಸರು ವಾರ್ಧಿಕ ಷಟ್ಪದಿ ಧಾಟಿಯಲ್ಲಿ ರಚಿತವಾಗಿರುವ ತಮ್ಮ ಪರಮ ಗುರುಗಳ ಸ್ತೋತ್ರದಲ್ಲಿ ಹೀಗೆ ಸುಂದರವಾಗಿ ಚಿತ್ರಿಸುತ್ತಾರೆ:

**"ವನಗುಹೆಯ ನವಧೂತತನದಿ ತಿರುಗುವನೊಮ್ಮೆ**
**ಮನೆಯೊಳಾತ್ಮೀಯರನುಸರಿಸಿ ತಿರುಗುವನೊಮ್ಮೆ**
**ಕಸನು ಕಂಡವರಂತೆ ಕನವರಿಪನೊಮ್ಮೊಮ್ಮೆ ಮೌನಪಿಡಿವನು ಮಲಗನು।**
**ವನಿತೆಯನ್ನು ತೆಕ್ಕೈಸಿ ಸರಸವಾಡುವನೊಮ್ಮೆ**
**ಧನಕನಕ ಸಂಹನನ ತೃಣಗಣಿಪನ್ನೊಮ್ಮೊಮ್ಮೆ**
**ತನು ಸ್ಮರಣೆ ಹಾರಿ ತನತನಗೆ ನಗುನಗುತಳುತ ದಿವರಾತ್ರಿಗಳ ಕಳೆವನು॥"**

ಅಧ್ಯಾತ್ಮಿಕ ಆನಂದದಲ್ಲಿ ಮೈಮರೆತು, ಸದಾ ಹರಿಧ್ಯಾನ ತತ್ಪರನಾಗಿರುವ ಇಂತಹ ಸಾಧಕರ ಚರ್ಯೆಯನ್ನು ಪರಮ ಹರಿಭಕ್ತರು ಮಾತ್ರ ಅರ್ಥಮಾಡಿ ಕೊಳ್ಳಬಲ್ಲರು. "ನೆರೆ ಹೊರೆಯ ಮೂಢರಿದ ಪರಿಹಾಸ್ಯಮಯವೆಂದು। ತರತರಹ ಯುಕ್ತಿಗಳ ಕಲ್ಪಿಸು"ವರಲ್ಲದೆ ಇವರ ಆಂತರ್ಯದ ಮೇರು ಮಜಲನ್ನು ಎಂದಿಗೂ ಅರಿಯಲಾರರು.

## ಹರಿದಾಸನಾಗುವ ಬಯಕೆ

ಈ ಸಂದರ್ಭದಲ್ಲಿ ಮತ್ತೊಮ್ಮೆ ಸುಬ್ಬರಾಯರಿಗೆ ಹರಿದಾಸ ಶ್ರೇಷ್ಠರ ಜೀವನ ಚರಿತ್ರೆಗಳ ಓದುವ ಅವಕಾಶ ಸಿಕ್ಕಿತು. ಹಿಂದೆ ಬೆಂಗಳೂರಿನಲ್ಲಿ ಶಾಸ್ತ್ರ ವ್ಯಾಸಂಗ ಮಾಡುತ್ತಿದ್ದಾಗ ಅವರಿಗೆ ಹರಿದಾಸ ಸಾಹಿತ್ಯದ ಪರಿಚಯವಾಗಿತ್ತಾದ್ದರಿಂದ

ದಾಸಪಂಥದಲ್ಲಿ ಒಲವು ಮೂಡಿತ್ತು ಸುಬ್ಬರಾಯರು ತಮ್ಮ ಬಿಡುವಿನ ವೇಳೆಯಲ್ಲಿ ಶ್ರೀಪುರಂದರದಾಸರು, ಶ್ರೀವಿಜಯದಾಸರು. ಶ್ರೀಗೋಪಾಲದಾಸರು ಮುಂತಾದ ಹರಿದಾಸರ ಜೀವನ ಚರಿತ್ರೆಗಳನ್ನೂ, ಅವರ ಕೀರ್ತನೆ ಸುಳಾದಿಗಳನ್ನೂ ಆಳವಾಗಿ ಅಭ್ಯಾಸ ಮಾಡಲು ತೊಡಗಿದರು. ಅವರು ತುಂಬಾ ಮೆಚ್ಚಿಕೊಂಡಿದ್ದ ಶ್ರೀಜಗನ್ನಾಥದಾಸರ ಮೇರುಕೃತಿಯಾದ "ಶ್ರೀಹರಿ ಕಥಾಮೃತಸಾರ"ವನ್ನು ಪ್ರತಿನಿತ್ಯ ಶ್ರದ್ಧೆಯಿಂದ ಪಾರಾಯಣ ಮಾಡತೊಡಗಿ ದರು. ಸಂಸಾರಲ್ಲಿದ್ದುಕೊಂಡೇ ಕಂಸಾರಿಯನ್ನು ಒಲಿಸಿಕೊಂಡು ಅಪರೋಕ್ಷ ಜ್ಞಾನವನ್ನು ಸಂಪಾದಿಸಿದ ಹರಿದಾಸರ ಬದುಕು ಸುಬ್ಬರಾಯರ ಮೇಲೆ ವಿಶೇಷ ಪರಿಣಾಮವನ್ನುಂಟು ಮಾಡಿತ್ತು. ಹರಿದಾಸರ ಸುಳಾದಿ, ಉಗಾಭೋಗ ಮತ್ತು ಕೀರ್ತನೆಗಳ ಆಳವಾದ ಅಧ್ಯಯನದಿಂದ ಗಹನವಾದ ಭಗವತ್ತತ್ವಗಳ ಒಳತಿರುಳ ಗೋಚರಿಸಿತ್ತು. ಕಲಿಯುಗದಲ್ಲಿ ಜನಿಸಿದ ಮೇಲೆ ತಾವೂ ಹರಿದಾಸರಾಗಿ, ಶ್ರೀಹರಿಯ ಒಲುಮೆಗೆ ಪಾತ್ರರಾಗಿ ಜೀವನವನ್ನು ಸಾರ್ಥಕ ಪಡಿಸಿಕೊಳ್ಳಬೇಕೆಂದು ಸುಬ್ಬರಾಯರು ಸಂಕಲ್ಪಿಸಿದರು.

ಹರಿದಾಸನಾಗಬೇಕಾದರೆ ಪರಮಾತ್ಮನ ಕಾರುಣ್ಯವಾಗಬೇಕು. ಗುರು ಮಖೇನ ಅಂಕಿತೋಪದೇಶವಾಗಬೇಕು. ಶ್ರೀಹರಿಯ ಪಾರಮ್ಯವನ್ನು ಸಾರುವ ಶ್ರೀಮದಾನಂದತೀರ್ಥರ ಮೋಕ್ಷಪ್ರದ ಮಾರ್ಗವನ್ನನುಸರಿಸಿ, ಹಲಧರಾನುಜ ನಾದ ಶ್ರೀಕೃಷ್ಣನನ್ನು ಹಲವಾರು ಜನ್ಮಗಳಲ್ಲಿ ಶ್ರದ್ಧೆಯಿಂದ ಪೂಜಿಸಿರಬೇಕು. ಹಲವಾರು ಜನ್ಮಗಳ ಧ್ಯಾನ, ಜಪ, ತಪ ಮುಂತಾದ ಪುಣ್ಯರಾಶಿಯು ಮಿಳಿತಗೊಂಡಿರಬೇಕು. "ಅಂಕಿತವಿಲ್ಲದ ದೇಹ ನಿಷಿದ್ಧ, ಅಂಕಿತವಿಲ್ಲ ದಿರಬಾರದು" ಎಂದು ದಾಸರಾಯರು ಹೇಳಿದಂತೆ ನೀತ ಗುರುಗಳು ಲಭ್ಯವಾಗಿ, ಅವರ ಕೃಪೆಯಿಂದ ಅಂಕಿತವಾಗಬೇಕು. ಬದುಕು ಬಿಂಬಮೂರ್ತಿಗೆ ಸಮರ್ಪಿತವಾಗಬೇಕು. ಆದರೆ ತಮಗೆ ಅಂಕಿತೋಪದೇಶ ಪಡೆಯುವ ಭಾಗ್ಯ ವಿದೆಯೇ? ಅಂಕಿತೋಪದೇಶ ನೀಡತಕ್ಕ ನೀತ ಗುರುಗಳು ಯಾರು? ಎಲ್ಲಿದ್ದಾರೆ? ಎಂದು ಮುಂತಾಗಿ ಸುಬ್ಬರಾಯರು ಯೋಚಿಸತೊಡಗಿದರು. ಆತ್ಮೋದ್ಧಾರದ ಹೆದ್ದಾರಿ ತೋರಿಸಬಲ್ಲ ಗುರುಗಳನ್ನು ಕರುಣಿಸುವಂತೆ ಪರಮಾತ್ಮನನ್ನು ಪರಿಪರಿಯಾಗಿ ಪ್ರಾರ್ಥಿಸತೊಡಗಿದರು.

ಹೀಗಿರುವಾಗ ನರಸೀಪುರದ ಸಮೀಪದಲ್ಲಿಯೇ ಇರುವ ದೇವರಾಯನ ದುರ್ಗದಲ್ಲಿ ಶ್ರೀಲಕ್ಷ್ಮೀನರಸಿಂಹ ಸ್ವಾಮಿಯ ರಥೋತ್ಸವ ಕಾರ್ಯಕ್ರಮ ಹತ್ತಿರ ಬಂದಿತು. ಪ್ರತಿವರ್ಷ ಫಾಲ್ಗುಣ ಶುದ್ಧ ಪೂರ್ಣಿಮೆ ಪುಬ್ಬಾ ನಕ್ಷತ್ರದಂದು ನಡೆಯುವ ರಥೋತ್ಸವದಲ್ಲಿ ತಪ್ಪದೇ ಭಾಗವಹಿಸುತ್ತಿದ್ದ ಸುಬ್ಬರಾಯರಿಗೆ ಆ ವರ್ಷವೂ ಭಾಗವಹಿಸಿ "ಗುರುವನ್ನು ಕರುಣಿಸು" ಎಂದು ಸ್ವಾಮಿಯನ್ನು ಬೇಡಿಕೊಳ್ಳುವ ಮನಸ್ಸಾಯಿತು.

**"ತಂಬೂರಿ ಮೀಟಿದವ ಭವಾಬ್ಧಿ ದಾಟಿದವ**
**ತಾಳವ ತಟ್ಟಿದವ ಸುರರೊಳು ಸೇರಿದವ**
**ಗೆಜ್ಜೆಯ ಕಟ್ಟಿದವ ಖಳರೆದೆ ಮೆಟ್ಟಿದವ**
**ಗಾಯನ ಪಾಡಿದವ ಹರಿಮೂರ್ತಿ ನೋಡಿದವ"**

ಎಂದು ಪುರಂದರದಾಸರು ಹೇಳಿರುವಂತೆ ಹರಿದಾಸ ಲಕ್ಷಣದ ಸೂಚಕವಾಗಿ ಕಾಲಿಗೆ ಗೆಜ್ಜೆ ಕಟ್ಟಿ, ತಾಳ ತಂಬೂರಿಗಳನ್ನು ಕೈಯಲ್ಲಿ ಹಿಡಿದು ದೇಹ ಮೋಹವನ್ನು ಬದಿಗೊತ್ತಿ ನರ್ತನ ಮಾಡುತ್ತಾ ಸ್ವಾಮಿಯ ಗುಣಗಾನ ಮಾಡುವ ಹಂಬಲ ಅವರಲ್ಲಿ ತುಂಬಿ ಬಂದಿತು.

ಹರಿದಾಸರ ಬಾಹ್ಯ ದೀಕ್ಷೆಗೆ ಅಗತ್ಯವಾದ ತಾಳ, ತಂಬೂರಿ, ಗೆಜ್ಜೆ ಮುಂತಾದವುಗಳನ್ನು ಸಂಪಾದಿಕೊಳ್ಳಲು ಸುಬ್ಬರಾಯರು ತಯಾರಿ ನಡೆಸಿದರು. ಅಷ್ಟೊಂದು ಸ್ಥಿತಿವಂತರಲ್ಲದ ಅವರಿಗೆ ಅವುಗಳನ್ನು ಕೊಂಡು ಕೊಳ್ಳಲು ಕೂಡಲೇ ದ್ರವ್ಯಾನುಕೂಲ ಒದಗಲಿಲ್ಲ. ಮನೆಯ ಸ್ಥಿತಿ-ಗತಿಗಳನ್ನು ಅರಿತಿದ್ದರಾದ್ದರಿಂದ ತಂದೆಯವರನ್ನು ಕೇಳಲೂ ಸಂಕೋಚವೆನ್ನಿಸಿತು. ಅದಕ್ಕಾಗಿ ಚಿಂತಿಸುತ್ತಾ ಬರುತ್ತಿರುವಾಗ ದೈವ ಪ್ರೇರಣೆಯೋ ಎನ್ನುವಂತೆ ಸುಬ್ಬರಾಯರ ಬಗ್ಗೆ ಗೌರವ ಭಾವನೆಯನ್ನು ಹೊಂದಿದ್ದ ಅದೇ ಗ್ರಾಮದ ಸಾಧ್ವೀಮಣಿಯೊಬ್ಬಳು ರಾಯರ ಚಿಂತೆಯನ್ನು ತಿಳಿದು ಅವರಿಗೆ ನೆರವಾಗಲು ಮುಂದೆ ಬಂದಳು. ಬಂಧು-ಬಳಗವಲ್ಲದ ಹೆಂಗಸೊಬ್ಬಳು ತಾನಾಗಿ ತಮ್ಮ ಹರಿ ಕೈಂಕರ್ಯ ದೀಕ್ಷೆಗೆ ನೆರವಾಗಲು ಮುಂದೆ ಬಂದಿರುವುದು ಸುಬ್ಬರಾಯರಿಗೆ ಆಶ್ಚರ್ಯವನ್ನುಂಟು ಮಾಡಿತು. ಇದೆಲ್ಲವೂ ಸ್ವಾಮಿಯ ವ್ಯಾಪಾರವೆಂದೇ ಅವರಿಗನ್ನಿಸಿತು. ತಾವು ಹರಿದಾಸನಾಗಲು ಪರಮಾತ್ಮನ ಸಮ್ಮತಿಯಿದೆ ಎಂದು ತಿಳಿದ ಸುಬ್ಬರಾಯರು ಆಯಾಚಿತವಾಗಿ ಒದಗಿದ ಈ ಸಹಾಯವನ್ನು

ಸಂತೋಷದಿಂದ ಸ್ವೀಕರಿಸಿ ಆ ದ್ರವ್ಯದಿಂದ ಹರಿದಾಸ ದೀಕ್ಷೆಗೆ ಬೇಕಾದ ಪರಿಕರಗಳನ್ನು ಕೊಂಡುಕೊಂಡರು.[1] ಕಾಲಿಗೆ ಗೆಜ್ಜೆ ಕಟ್ಟಿ, ತಾಳ ತಂಬೂರಿಗಳನ್ನು ಹಿಡಿದು ಹರಿದಾಸರ ಉಡುಪಿನಲ್ಲಿ ಸುಬ್ಬರಾಯರು ಕರಿಗಿರಿಯಲ್ಲಿ ನಡೆಯುವ ಶ್ರೀಲಕ್ಷ್ಮೀ ನರಸಿಂಹ ಸ್ವಾಮಿಯ ರಥೋತ್ಸವಕ್ಕೆ ಹೊರಟುನಿಂತರು.

## ಮಾರ್ಗದರ್ಶನ

ದೇವರಾಯನದುರ್ಗವೆಂದು ಹೆಸರಾಗಿರುವ ಕರಿಗಿರಿ ಕ್ಷೇತ್ರ ಪುರಾಣ ಪ್ರಸಿದ್ಧವಾದ ಪುಣ್ಯಕ್ಷೇತ್ರ. ಪ್ರಹ್ಲಾದ ವರದನಾದ ಶ್ರೀಲಕ್ಷ್ಮೀನರಸಿಂಹಸ್ವಾಮಿ ಈ ಬೆಟ್ಟದಲ್ಲಿ ಶ್ರೀಯೋಗಾನರಸಿಂಹ ಮತ್ತು ಶ್ರೀಭೋಗಾನರಸಿಂಹ ಎಂಬ ಎರಡು ರೂಪಗಳಿಂದ ಭಕ್ತಾಭೀಷ್ಟಪ್ರದನಾಗಿ ನಿತ್ಯ ಸನ್ನಿಹಿತನಾಗಿದ್ದಾನೆ. ಬ್ರಹ್ಮದೇವರ ತಪಸ್ಸಿಗೆ ಸಂತುಷ್ಟವಾಗಿ ಶ್ರೀಯೋಗಾ ನರಸಿಂಹ ಇಲ್ಲಿ ಶ್ರೀ ಲಕ್ಷ್ಮೀದೇವಿಯೊಡನೆ ಆವಿರ್ಭವಿಸಿದ್ದರೆ ದೂರ್ವಾಸ ಮುನಿಗಳ ಭಕ್ತಿಪಾಶಕ್ಕೆ ಬಂಧಿತನಾಗಿ ಶ್ರೀಹರಿ ಲಕ್ಷ್ಮೀ ಸಮೇತನಾಗಿ ಶ್ರೀಭೋಗಾ ನರಸಿಂಹಸ್ವಾಮಿಯಾಗಿ ಇಲ್ಲಿ ನೆಲೆಸಿದ್ದಾನೆ. ಬ್ರಹ್ಮದೇವರ ವರಬಲದಿಂದ ಮದೋನ್ಮತ್ತನಾಗಿ ತಾಪಸೋತ್ತಮರುಗಳಿಗೆ ತೊಂದರೆ ಕೊಡುತ್ತಿದ್ದ "ಕುಂಭಾಸುರ" ನನ್ನು ಶ್ರೀಹರಿ ನರಸಿಂಹ ರೂಪದಿಂದ ಸಂಹಾರ ಮಾಡಿದಾಗ ಬ್ರಹ್ಮಾದಿ ದೇವತೆಗಳು ಆನಂದದಿಂದ ಪುಷ್ಪವೃಷ್ಟಿಯನ್ನು ಮಾಡಿದರು. ಇಡೀ ಪರ್ವತವೇ ಸುಗಂಧಭರಿತ ಪುಷ್ಪಗಳಿಂದ ಮುಚ್ಚಲ್ಪಟ್ಟು ಕುಸುಮ ರಾಶಿಯಂತೆ ಕಂಗೊಳಿಸಿದ ಕಾರಣ ಇದಕ್ಕೆ "ಕುಸುಮಾಚಲ, ಪುಷ್ಕರಾದ್ರಿ ಹಾಗೂ ಕುಂಭೀಬೆಟ್ಟ" ಎಂಬ ಹೆಸರುಗಳು ಪ್ರಾಪ್ತವಾದವು. ಪುಷ್ಪಗಳ ಸುಗಂಧ ಎಲ್ಲೆಡೆಯೂ ಪಸರಿಸಿದ್ದರಿಂದ ಈ ಗಿರಿ "ಸುಗಂಧ ಪರ್ವತ" ಎಂದೂ ಕರೆಯಲ್ಪಟ್ಟಿತು. ಯುಗಯುಗಗಳಲ್ಲಿಯೂ ಪ್ರಖ್ಯಾತವಾಗಿರುವ ಈ ಗಿರಿಗೆ ಕೃತಯುಗದಲ್ಲಿ "ಉತ್ಕೀಲಾದ್ರಿ" ಎಂಬ ಹೆಸರಿದ್ದರೆ, ತ್ರೇತಾಯುಗದಲ್ಲಿ ಇದು "ಸಿಂಹಾದ್ರಿ" ಎಂದು ಸಂಬೋಧಿಸಲ್ಪಡುತ್ತಿತ್ತು. ದ್ವಾಪರದಲ್ಲಿ ಸಿದ್ಧಗಿರಿಯಾಗಿದ್ದ ಈ ಕ್ಷೇತ್ರ ಕಲಿಯುಗದಲಿ "ಕರಿಗಿರಿ" ಎಂದು ಪ್ರಖ್ಯಾತವಾಯಿತು. ಈ ಪವಿತ್ರ

1. ಕೆಲವು ಕಾಲಾನಂತರ ದಾಸರು ಅಡವಿಟ್ಟ ಆಕೆಯ ಒಡವೆಯನ್ನು ಬಿಡಿಸಿಕೊಂಡು ಬಂದು ಆಕೆಗೆ ಹಿಂದಿರುಗಿಸಿದರಲ್ಲದೆ ತಮ್ಮ ಹರಿದಾಸ ದೀಕ್ಷೆಗೆ ನೆರವಾದ ಆ ಸಾಧ್ವೀಮಣಿಯನ್ನು ಹೃದಯದುಂಬಿ ಆಶೀರ್ವದಿಸಿದರು.

ಕ್ಷೇತ್ರವು ವಿಜಯನಗರದ ಆಳ್ವಿಕೆಯ ಕಾಲದಲ್ಲಿ "ಜಯದುರ್ಗ"ವೆಂದು ಕರೆಸಿಕೊಂಡಿದ್ದರೆ, ಮೈಸೂರರಸರ ಕಾಲದಲ್ಲಿ ದೇವರಾಯನೆಂಬ ದಳವಾಯಿಯು ಈ ಗಿರಿಯನ್ನು ಗೆದ್ದು ಮೈಸೂರು ರಾಜ್ಯದ ಅಧಿಪತ್ಯಕ್ಕೆ ಸೇರಿಸಿದ ಕಾರಣ ಆಗ ಪ್ರಭುಗಳಾಗಿದ್ದ ರಾಜ ಒಡೆಯರು ಸಂತುಷ್ಟರಾಗಿ ಈ ಗಿರಿಗೆ ದೇವರಾಯ ದುರ್ಗವೆಂದೇ ನಾಮಕರಣ ಮಾಡಿದರು. ಹಾಗಾಗಿ ಇದಕ್ಕೆ ಈಗ "ದೇವರಾಯನ ದುರ್ಗ"ವೆಂಬ ಹೆಸರೇ ಹೆಚ್ಚು ರೂಢಿಯಲ್ಲಿದೆ.

ಪುರಾಣ ಪ್ರಸಿದ್ಧವಾದ ಇಂತಹ ಪುಣ್ಯ ಕ್ಷೇತ್ರದಲ್ಲಿ ನಡೆಯುವ ಶ್ರೀಲಕ್ಷ್ಮೀ ನರಸಿಂಹ ಸ್ವಾಮಿಯ ರಥೋತ್ಸವಕ್ಕೆ ಶ್ರೀಸುಬ್ಬರಾಯರು ಆಗಮಿಸಿದರು.

ಫಾಲ್ಗುಣ ಮಾಸದ ಹುಣ್ಣಿಮೆ ಪುಬ್ಬಾ ನಕ್ಷತ್ರದ ಶುಭ ದಿವಸದಂದು ಸ್ವಾಮಿಯ ರಥೋತ್ಸವ ಸಂಭ್ರಮದಿಂದ ನಡೆಯುತ್ತಿವೆ. ಅನೇಕ ಸ್ಥಳಗಳಿಂದ ಸಹಸ್ರಾರು ಸಂಖ್ಯೆಯಲ್ಲಿ ಭಕ್ತ ಜನರು ಬಂದು ಸೇರಿದ್ದಾರೆ. ಎಲ್ಲೆಲ್ಲೂ ನಾಮ ಸಂಕೀರ್ತನೆಗಳಾಗುತ್ತಿವೆ. ಸ್ವಾಮಿಯ ಜಯಘೋಷ ಮುಗಿಲು ಮುಟ್ಟುತ್ತಿದೆ. ಸುಬ್ಬರಾಯರೂ ಹರಿದಾಸರ ಭಜನೆಯ ತಂಡದೊಂದಿಗೆ ಬೆರೆತು ತಂಬೂರಿ ಮೀಟುತ್ತಾ ಹರಿ ಸಂಕೀರ್ತನೆ ಮಾಡುತ್ತಿದ್ದಾರೆ. ಕರು ಹಸುವನ್ನು ಸೇರಲು ಹಂಬಲಿಸುವಂತೆ ನೀತ ಗುರುಗಳನ್ನು ಕಾಣಲು ಸುಬ್ಬರಾಯರು ಆರ್ತರಾಗಿ ಪರಿತಪಿಸುತ್ತಿದ್ದಾರೆ. ಕಂಠ ಬಿಗಿದಿದೆ, ಕೊರಳು ಉಬ್ಬಿದೆ; ಕಣ್ಣು ತುಂಬಾ ಧಾರಾಕಾರವಾಗಿ ಕಂಬನಿ ಸುರಿಯುತ್ತಿದೆ. ಆ ಸಂದರ್ಭದಲ್ಲಿ ನಡೆದ ಒಂದು ಘಟನೆ ಉಲ್ಲೇಖಾರ್ಹವಾದದ್ದು.

"ಭಕ್ತ್ಯುದ್ರೇಕದಿಂದ ಗುರುವಿಗಾಗಿ ಹಂಬಲಿಸುತ್ತಾ ನಿಂತಿದ್ದ ಸುಬ್ಬರಾಯರಿಗೆ ಆ ಜನ ಜಂಗುಳಿಯಲ್ಲಿ ತೇಜಸ್ವೀ ಬ್ರಾಹ್ಮಣನೊಬ್ಬನ ಪರಿಚಯವಾಯಿತು. ತನ್ನ ಹೆಸರನ್ನು "ನರಸಿಂಹಾಚಾರ್ಯ" ಎಂದು ಹೇಳಿಕೊಂಡ ಆತ ಸುಬ್ಬರಾಯ ರನ್ನು ತುಂಬಾ ಆತ್ಮೀಯವಾಗಿ ಮಾತನಾಡಿಸಿದ. ಅವರ ಹರಿದಾಸ ವೇಷಭೂಷಣಗಳನ್ನು ಕಂಡು 'ಏನು ದಾಸರೇ, ನಿಮಗೆ ಅಂಕಿತೋಪದೇಶವಾಗಿದೆಯೇ? ನಿಮ್ಮ ಗುರುಗಳು ಯಾರು?' ಎಂದು ಪ್ರಶ್ನಿಸಿದ. ಅದಕ್ಕೆ ಸುಬ್ಬರಾಯರು ತಮಗಿನ್ನೂ ಅಂಕಿತೋಪದೇಶವಾಗಿಲ್ಲ ವೆಂದೂ, ನೀತ ಗುರುಗಳು ಇನ್ನೂ ದೊರಕಿಲ್ಲವೆಂದೂ ತಿಳಿಸಿದರು. ಅದಕ್ಕೆ ಆ ಬ್ರಾಹ್ಮಣ 'ಹಾಗಾದರೆ ಅಂಕಿತೋಪದೇಶಕ್ಕಾಗಿ ಯಾರನ್ನು

ಆಶ್ರಯಿಸಬೇಕೆಂದಿದ್ದೀರಿ. ಇಂಥಾ ಗುರುಗಳನ್ನೇ ಆಶ್ರಯಿಸಬೇಕೆಂಬ ಉದ್ದೇಶ ನಿಮಗಿದೆಯೇ?' ಎಂದು ಕೇಳಿದ. ಆಗ ಸುಬ್ಬರಾಯರು ಹಾಗೇನಿಲ್ಲ. ನನಗೆ ಈ ವಿಷಯದಲ್ಲಿ ಅಷ್ಟು ಪರಿಚಯವಿಲ್ಲ. ಆದರೂ 'ರಂಗದಾಸರೆಂಬುವರೊಬ್ಬರು ಹರಿಸಂಕೀರ್ತನೆಯಲ್ಲಿ ಪ್ರಾವೀಣ್ಯತೆಯನ್ನು ಪಡೆದಿದ್ದು ಉತ್ತಮ ಹರಿದಾಸರೆಂದು ಕೇಳಿ ಬಲ್ಲೆ. ಅವರನ್ನೇ ಆಶ್ರಯಿಸಬೇಕೆಂದಿದ್ದೇನೆ' ಎಂದು ಹೇಳುತ್ತಿದ್ದಂತೆ ಆ ಬ್ರಾಹ್ಮಣ: "ಸುಬ್ಬರಾಯರೇ ಈ ವಿಷಯದಲ್ಲಿ ತಾವು ನಾನು ಹೇಳುವ ಮಾತನ್ನು ಕೇಳಿರಿ. ಅವಿಚ್ಛಿನ್ನವಾಗಿ ಹರಿದಾಸ ಪರಂಪರೆಯಲ್ಲಿ ಬಂದಿರುವ ದೊಡ್ಡಬಳ್ಳಾಪುರದ ಶ್ರೀರಾಘವೇಂದ್ರ ದಾಸರೆಂಬುವವರು ಒಬ್ಬರಿದ್ದಾರೆ. ಮುದ್ದು ಮೋಹನವಿಠಲಾಂಕಿತರಾದ ಅವರೇ ನಿಮ್ಮನ್ನು ಉದ್ಧಾರ ಮಾಡತಕ್ಕ ನೀತ ಗುರುಗಳು. ಆದರೆ ಅವರು ದುರ್ಲಭರು. ಹರಿದಾಸ ಶ್ರೇಷ್ಠರಾದ ಅವರು ಒಂದು ಸ್ಥಳದಲ್ಲಿ ದೊರಕಲಾರರು. ಒಂದೇ ಠಾವಿನಲ್ಲಿ ವಾಸಮಾಡರು. ಪ್ರತಿವರ್ಷ ಸೋದೆ ವಾದಿರಾಜ ಸ್ವಾಮಿಗಳ ಆರಾಧನೋತ್ಸವ ದಲ್ಲಿ, ಮುಳಬಾಗಿಲಿನಲ್ಲಿ ನಡೆಯುವ ಶ್ರೀಪಾದರಾಜರ ಪುಣ್ಯದಿನಗಳಲ್ಲಿ ಹಾಗೂ ಮಂತ್ರಾಲಯ ಶ್ರೀರಾಘವೇಂದ್ರ ಗುರುಸಾರ್ವಭೌಮರ ಆರಾಧನಾ ಮಹೋತ್ಸವದಲ್ಲಿ ತಪ್ಪದೇ ಭಾಗವಹಿಸುವರು. ಇದಲ್ಲದೆ ಪ್ರತಿವರ್ಷ ಬ್ರಹ್ಮೋತ್ಸವ ಸಂದರ್ಭದಲ್ಲಿ ಶ್ರೀನಿವಾಸನ ದರ್ಶನಕ್ಕಾಗಿ ತಿರುಪತಿ ಕ್ಷೇತ್ರಕ್ಕೂ, ಶ್ರೀಕೃಷ್ಣನ ಚರಣ ಕಮಲಗಳನ್ನು ಕಣ್ಣುಗಳಲ್ಲಿ ತುಂಬಿಕೊಳ್ಳುವುದಕ್ಕೋಸ್ಕರ ಪರ್ಯಾಯ ಕಾಲದಲ್ಲಿ ಉಡುಪಿ ಕ್ಷೇತ್ರಕ್ಕೂ ದಯಮಾಡಿಸುವರು. ಪುಣ್ಯವಂತರಿಗೆ ಮಾತ್ರ ಗೋಚರಿಸತಕ್ಕ ಅವರು ಶಿಷ್ಯರನ್ನು ಪರೀಕ್ಷಿಸದೆ ಎಂದೂ ಅಂಕಿತೋಪದೇಶವನ್ನು ನೀಡಲಾರರು. ವಿಚಿತ್ರ ಚರ್ಯೆಯನ್ನು ಹೊಂದಿರುವ ಅವರನ್ನು ಸಾಮಾನ್ಯರು ಎಂದಿಗೂ ಗ್ರಹಿಸಲಾರರು. ದುರ್ಜನರಿಗೆ ಮಲಿನ ರಂದದಿ ತೋರುವ ಆ ಮಹಾನುಭಾವರು ಸಾತ್ವಿಕ ಸ್ವಾಭಾವದ ಸುಜೀವಿಗಳಿಗೆ ಅತ್ಯಂತ ಪ್ರಿಯರಾದವರು. ನೀವು ಏಕ ಮನಸ್ಸಿನಿಂದ ಅವರನ್ನೇ ಅಂಕಿತೋಪದೇಶಕ್ಕಾಗಿ ಪ್ರಾರ್ಥಿಸಿರಿ. ಭಗವದನುಗ್ರಹದಿಂದ ನಿಮಗೆ ಕ್ಷಿಪ್ರದಲ್ಲಿ ಗುರುದರ್ಶನವಾಗುವುದು. ಕಳವಳ ಪಡಬೇಡಿ" ಎಂದು ಹೇಳಿ ಸುಬ್ಬರಾಯ ರನ್ನು ಸಂತೈಸಿದ. ನೋಡುತ್ತಿರುವಾಗಲೇ ಆ ಬ್ರಾಹ್ಮಣ ಕ್ಷಣ ಮಾತ್ರದಲ್ಲಿ ಭಕ್ತರ ಗುಂಪಿನೊಳಗೆ ನುಸುಳಿ ಕಣ್ಮರೆಯಾಗಿ ಹೋದ. ಅವರು ಎಷ್ಟು ಹುಡುಕಿದರೂ

ಆತ ಮತ್ತೆ ಕಾಣಿಸಿಕೊಳ್ಳಲಿಲ್ಲ. ಈ ಘಟನೆ ಅವರಿಗೆ ಆಶ್ಚರ್ಯ ಸಂತೋಷಗಳೆರಡನ್ನೂ ಉಂಟು ಮಾಡಿತು.

ಗುರುವಿಗಾಗಿ ಹಂಬಲಿಸುತ್ತಿದ್ದ ತಮಗೆ ಮಾರ್ಗದರ್ಶನ ಮಾಡಿದ ಆ "ನರಸಿಂಹಾಚಾರ್ಯ" ಬೇರೆ ಯಾರೂ ಆಗಿರದೆ ಹಿಂದೆ ಪ್ರಹ್ಲಾದನನ್ನು ಉದ್ಧರಿಸಿದ ಸಾಕ್ಷಾತ್ ನರಸಿಂಹದೇವರೇ ಎಂದು ಸುಬ್ಬರಾಯರು ಭಾವಿಸಿದರು. ಗುರು ಮಾರ್ಗವನ್ನು ತೋರಿದ ಹರಿ ಕಾರುಣ್ಯವನ್ನು ನೆನೆದು ಅವರ ಹೃದಯ ತುಂಬಿ ಬಂದಿತು. ಆ ತೇಜಸ್ವೀ ಬ್ರಾಹ್ಮಣ ಸೂಚಿಸಿದ 'ದೊಡ್ಡಬಳ್ಳಾಪುರದ ದಾಸರನ್ನು ಎಂದು ಕಂಡೇನು? ಎಂದು ಅವರಿಗೆ ಶರಣಾದೇನು? ಎಂದು ಅವರ ಪಾವನ ಪಾದ ದ್ವಂದ್ವಗಳನ್ನು ತಮ್ಮ ಬೊಗಸೆಯಲ್ಲಿ ಹಿಡಿದೇನು?' ಎಂದು ಪರಿಪರಿಯಾಗಿ ಯೋಚಿಸುತ್ತಾ ಸುಬ್ಬರಾಯರು ಗುರುದರ್ಶನಕ್ಕಾಗಿ ಚಡಪಡಿಸತೊಡಗಿದರು.

## ಅರಸಿ ಬಂದ ಗುರು

ದೊಡ್ಡಬಳ್ಳಾಪುರದ ದಾಸರೆಂದು ಪ್ರಸಿದ್ಧರಾದ ಶ್ರೀಮುದ್ದುಮೋಹನ ದಾಸರು ಹೆಸರೇ ಹೇಳುವಂತೆ ಬೆಂಗಳೂರಿನ ಸಮೀಪವಿರುವ ದೊಡ್ಡಬಳ್ಳಾಪುರ ದವರು. ದಾಸರ ಅಂಕಿಪೂರ್ವನಾಮ ಶ್ರೀರಾಘವೇಂದ್ರಪ್ಪ. ಹಾಗಾಗಿ ದೊಡ್ಡಬಳ್ಳಾಪುರದ ಶ್ರೀರಾಘವೇಂದ್ರದಾಸರೆಂಬ ಹೆಸರೇ ಹೆಚ್ಚು ರೂಢಿಯಲ್ಲಿ ಬಂದಿತು.

ಯತ್ಯಾಶ್ರಮವನ್ನು ಸ್ವೀಕರಿಸದಿದ್ದರೂ ಯತಿಗಳಂತೆ ಜೀವಿಸಿದ್ದ ಮುದ್ದು ಮೋಹನದಾಸರ ಬದುಕು ರೋಮಾಂಚಕರವಾದದ್ದು. ಶ್ರೀವಿಜಯದಾಸರ ಪಾವನ ಪರಂಪರೆಯಲ್ಲಿ ಬಂದಿದ್ದ ಶ್ರೀವೇಣುಗೋಪಾಲದಾಸರ ಶಿಷ್ಯಸಂತತಿಗೆ ಸೇರಿದ ದಾಸರು ಕ್ರಿ.ಶ. 1830ರಿಂದ 1898ರವರೆಗೆ ಸುಜೀವಿಗಳಿಗೆ ದೃಷ್ಟಿಗೋಚರವಾಗಿದ್ದವರು. ಬೆಳಗಾವಿ ಜಿಲ್ಲೆಯ ಸವದಿ ಗ್ರಾಮದ ರಾಮಚಂದ್ರ ದಾಸರೆಂದು ಖ್ಯಾತರಾದ ಶ್ರೀವರ ವಿಠಲದಾಸರ ಶಿಷ್ಯೋತ್ತಮರು. ಕನ್ಯಾಸೆರೆ ಯನ್ನು ಬಿಡಿಸಬೇಕೆಂಬ ಏಕಮಾತ್ರ ಉದ್ದೇಶದಿಂದ ಹುಟ್ಟು ಕುರುಡಿಯಾದ ಹುಡುಗಿಯೊಬ್ಬಳನ್ನು ವಿವಾಹವಾಗಿ ಗೃಹಸ್ಥಾಶ್ರಮಿಗಳಾದರೂ ದಾಸರು ನೈಷ್ಠಿಕ ಬ್ರಹ್ಮಚಾರಿಗಳಾಗಿದ್ದರು. ಮಧ್ವಶಾಸ್ತ್ರ ಸಂಪನ್ನರಾಗಿ ವೈರಾಗ್ಯಾದಿ ಸದ್ಗುಣಗಳಿಂದ

ಕಂಗೊಳಿಸುತ್ತಿದ್ದರು. ಕೃಷ್ಣಾಂಜಿನದ ಕಸೆ ಅಂಗಿ ಕುಲಾವಿಗಳನ್ನು ಧರಿಸಿ ವಿಚಕ್ಷಣ ವೇಷಧಾರಿಗಳಾಗಿ, ಪರಪಾಕನೇಮದಿಂದ, ಗ್ರಾಮ್ಯೈಕ ರಾತ್ರಿ ಪರ್ಯಟನೆ ಮಾಡುತ್ತಾ ಶುದ್ಧ ವೈಷ್ಣವ ಚಿಹ್ನೆಗಳಿಂದ ಭೂಷಿತರಾಗಿ ಋಷಿಸದೃಶ ರೂಪದಿಂದ ಶೋಭಿಸುತ್ತಿದ್ದರು.

"ಚಿಪ್ಪಗಿರಿ ಸುಕ್ಷೇತ್ರದಿ। ಗೊಪ್ಪ ಶ್ರೀಅಂಕಿತವನೂ
ಅಪ್ಪ ಶ್ರೀವರರಿಂದಲಿ। ಒಪ್ಪಿ ನೀ ಕೈಗೊಂಡೆಯೋ।
ಮೂರೊಂದು ಸಲ ಶ್ರೀಕಾಶಿಗೇ। ಭೂರಿಸಲ ಶ್ರೀಉಡುಪಿಗೇ
ಸಾರಿ ವೆಂಕಟಪತಿಯನೂ। ಬಾರಿ ಬಾರಿಗೆ ನೋಡಿದೇ॥"

ಎಂದು ಶ್ರೀಗುರುಗೋವಿಂದದಾಸರು ತಾವು ರಚಿಸಿರುವ "ಮುದ್ದುಮೋಹನದಾಸರೇ ನಿಮ್ಮ। ಶುದ್ಧ ಪಾದವ ನಂಬಿದೆ" ಎಂಬ ಕೃತಿಯಲ್ಲಿ ಹೇಳಿರುವ ಹಾಗೆ ಶ್ರೀವಿಜಯದಾಸರ ಆರಾಧನೆಗಾಗಿ ಒಮ್ಮೆ ಚಿಪ್ಪಗಿರಿ ಕ್ಷೇತ್ರಕ್ಕೆ ಹೋಗಿದ್ದಾಗ ಶ್ರೀವರವಿಠಲದಾಸರ ಭೇಟಿಯಾಗಿ ಅವರಿಂದ ಅಂಕಿತೋಪದೇಶವಾಯಿತು. ದಾಸತ್ವಕ್ಕೆ ಗುರುಮುಖೇನ ಅಂಗೀಕಾರ ಮುದ್ರೆ ಯೊದಗಿತು. ಅಂದಿನಿಂದ ರಾಘವೇಂದ್ರದಾಸರು ಶ್ರೀಮುದ್ದುಮೋಹನ ದಾಸ ರಾದರು. ಯಾವ ಸ್ಥಳದಲ್ಲಿಯೂ ಹೆಚ್ಚು ಕಾಲ ನಿಲ್ಲದೆ ಸದಾ ಸಂಚರಿಸುತ್ತಿದ್ದ ದಾಸರು ನಾಲ್ಕು ಬಾರಿ ಪಾದಚಾರಿಗಳಾಗಿಯೇ ಕಾಶಿ ಕ್ಷೇತ್ರಯಾತ್ರೆ ಕೈಗೊಂಡಿದ್ದರು. ಉಡುಪಿಯ ಪರ್ಯಾಯೋತ್ಸವ ಹಾಗೂ ತಿರುಪತಿಯ ಬ್ರಹ್ಮೋತ್ಸವಗಳಲ್ಲಿ ಪ್ರತಿಬಾರಿ ಹರಿದಾಸ ವೇಷಭೂಷಿತರಾಗಿ, ಐದುತಂತಿ ಗಳಿಂದ ಕೂಡಿದ ತಂಬೂರಿಯೊಂದನ್ನು ಧರಿಸಿ ಕಾಣಿಸಿಕೊಳ್ಳುತ್ತಿದ್ದರಲ್ಲದೆ ಚಿಪ್ಪಗಿರಿ, ಸೋದೆ, ಮಳಖೇಡ, ಮಂತ್ರಾಲಯ ಮುಂತಾದ ಸ್ಥಳಗಳಲ್ಲಿ ನಡೆಯುವ ಆರಾಧನೋತ್ಸವಗಳಲ್ಲಿ ದಾಸರು ತಪ್ಪದೆ ಭಾಗವಹಿಸುತ್ತಿದ್ದರು. ಒಮ್ಮೆ ಕಾಶಿಕ್ಷೇತ್ರಕ್ಕೆ ಹೋಗಿದ್ದಾಗ ಅಲ್ಲಿಂದ ಶಿವಲಿಂಗವೊಂದನ್ನು ತಂದಿದ್ದ ದಾಸರು ಮುಂದೆ ದೈವೀ ಸೂಚನೆಯಂತೆ ಸ್ವಗ್ರಾಮವಾದ ದೊಡ್ಡಬಳ್ಳಾಪುರದಲ್ಲಿ ತಮ್ಮ ಆರಾಧ್ಯದೈವವಾದ ಶ್ರೀವಿಜಯವಿಠಲನ ದೇವಸ್ಥಾನವನ್ನು ನಿರ್ಮಿಸಿದಾಗ ಆ ಶಿವಲಿಂಗವನ್ನು ಅಲ್ಲಿ ಪ್ರತಿಷ್ಠಾಪಿಸಿದರು.

ದೊಡ್ಡಬಳ್ಳಾಪುರದ ಶ್ರೀಮುದ್ದುಮೋಹನದಾಸರು ಕೇಳಿದರಿಗೆಲ್ಲಾ ಅಂಕಿತೋಪದೇಶ ನೀಡುತ್ತಿರಲಿಲ್ಲ. ಜೀವಿಯ ಸ್ವಭಾವ ಯೋಗ್ಯತೆಗಳನ್ನು

ಪರೀಕ್ಷಿಸದೆ ಎಂದೂ, ಯಾರನ್ನೂ ಶಿಷ್ಯರಾಗಿ ಪರಿಗ್ರಹಿಸುತ್ತಿರಲಿಲ್ಲ. ಅಲ್ಲಲ್ಲಿ ಚೆದುರಿ ಹೋಗಿರುವ ಸಚ್ಚೇತನಗಳನ್ನು ತಾವೇ ಹುಡುಕಿಕೊಂಡು ಹೋಗಿ ಹೆಕ್ಕಿ ತೆಗೆದು ಅವರಿಗೆ ಪರಮಾತ್ಮನ ದಿವ್ಯ ಅಂಕಿತವಿತ್ತು ಪರತತ್ವಮಾರ್ಗ ತೋರುತ್ತಿದ್ದರು. ಶ್ರೀಮುದ್ದುಮೋಹನದಾಸರು ನಡೆಸಿದ ವಾಙ್ಮಯಸೇವೆ ಅನುಪಮವಾದದ್ದು. ಹರಿದಾಸ ಸಾಹಿತ್ಯ ಭಂಡಾರಕ್ಕೆ ಅವರು ನೀಡಿದ ಕೊಡುಗೆ ಅಮೂಲ್ಯವಾದದ್ದು. ಹಲವಾರು ಪುಣ್ಯಕ್ಷೇತ್ರಗಳನ್ನು ಸಂಚರಿಸಿ ನಿರಂತರ ಭಕ್ತಿ ಸಾಮ್ರಾಜ್ಯದಲ್ಲಿಯೇ ವಿಹರಿಸಿದ ದಾಸರು ಸಾಕಷ್ಟು ಸಂಖ್ಯೆಯಲ್ಲಿ ಸುಳಾದಿ, ಉಗಾಭೋಗ, ಕೀರ್ತನೆಗಳನ್ನು ರಚಿಸಿರುವ ಸಾಧ್ಯತೆಯಿದೆಯಾದರೂ ಈಗ ಸಿಕ್ಕಿರುವ ಕೃತಿಗಳ ಸಂಖ್ಯೆ ಅಲ್ಲವೆಂದೇ ಹೇಳಬೇಕು. ಸಿಕ್ಕಿರುವಷ್ಟೇ ಕೃತಿಗಳು ಅತ್ಯುಚ್ಚ ಮಟ್ಟದ ಪ್ರಕಾರದಲ್ಲಿ ಒಡಮೂಡಿದ್ದು ಅವರ ಪ್ರಖರ ಹರಿದಾಸ ದೀಕ್ಷೆ ಹಾಗೂ ವಿಶಿಷ್ಟ ಬಿಂಬೋಪಾಸನೆಯ ಮೇಲೆ ಬೆಳಕು ಚೆಲ್ಲುತ್ತವೆ.

ಹೀಗೆ ಹರಿದಾಸ ಸಾಹಿತ್ಯಕ್ಕೆ ವಿಶಿಷ್ಟ ಸೇವೆ ಸಲ್ಲಿಸಿ ಶಿಷ್ಯ ಸಮೂಹದೊಂದಿಗೆ ಹರಿನಾಮದ ಸೌರಭವನ್ನು ಯಾಯಾವರದ ಮೂಲಕ ಪರಿಣಾಮಕಾರಿಯಾಗಿ ಜನಮಕ್ಕೆ ಮುಟ್ಟಿಸುತ್ತಿದ್ದ ದಾಸರು ದಯಾಮಯರಾದರೂ ದುರ್ಲಭರು. ಪುಣ್ಯ ಫಲಿಸಿದವರ ಕಣ್ಣಿಗೆ ಮಾತ್ರ ಗೋಚರಿಸುತ್ತಿದ್ದವರು. ಶ್ರೀಮುದ್ದುಮೋಹನ ವಿಠಲನನ್ನು ಸಾಕ್ಷಾತ್ಕರಿಸಿಕೊಂಡು ಅಪರೋಕ್ಷ ಜ್ಞಾನ ಪಡೆದಿದ್ದ ಇಂಥ ಮಹಾತ್ಮರ ದರ್ಶನಕ್ಕಾಗಿ ಸುಬ್ಬರಾಯರು ಮಳೆಗಾಗಿ ಕಾದು ಕುಳಿತ ಜಾತಕ ಪಕ್ಷಿಯಂತೆ ಎದುರು ನೋಡತೊಡಗಿದರು.

ದೇವರಾಯನದುರ್ಗದ ರಥೋತ್ಸವ ಸಮಾರಂಭ ಮುಗಿದು ಇನ್ನು ಹದಿನೈದು ದಿವಸಗಳು ಕಳೆದಿರಲಿಲ್ಲ. ಆಗಲೇ "ಗೋವತ್ಸದನಿ ಕೇಳಿ ಆವು ಧಾವಿಸುವಂತೆ" ತನಗಾಗಿ ಪರಿತಪಿಸುತ್ತಿರುವ ಶಿಷ್ಯನನ್ನು ಹುಡುಕಿಕೊಂಡು ಗುರುಗಳಾದ ಶ್ರೀಮುದ್ದುಮೋಹನದಾಸರೇ ಧಾವಿಸಿ ಬಂದರು. ಇದಲ್ಲವೇ ಗುರುಕಾರುಣ್ಯ! ವೃದ್ಧರಾಗಿದ್ದ ದಾಸರು ಕೃಷ್ಣಾಂಜಿನದ ಕಸೆ ಅಂಗಿಯನ್ನು ಮತ್ತು ಉದ್ದವಾದ ಕುಲಾವಿಯನ್ನು ತೊಟ್ಟು, ಹೆಗಲ ಮೇಲೆ ಐದುತಂತಿಗಳ ತಂಬೂರಿಯನ್ನು ಧರಿಸಿ ಕುದುರೆಯ ಮೇಲೆ ಕುಳಿತು, ಹಸಿಬೆ ಚೀಲಗಳನ್ನು ಹೊತ್ತ ಇಬ್ಬರು ಶಿಷ್ಯರೊಂದಿಗೆ ನರಸೀಪುರಕ್ಕೆ ದಯಮಾಡಿಸಿದರು. ಮಾರ್ಗಾಯಾಸ ಪರಿಹರಿಸಿಕೊಳ್ಳಲು ಸುಬ್ಬರಾಯರ ತಂದೆಯವರ ಪ್ರಾರ್ಥನೆ

ಯಂತೆ ಅವರ ಮನೆಯಲ್ಲಿಯೇ ಇಳಿದುಕೊಂಡರು. ಅಂದು ಸುಬ್ಬರಾಯರ ಪತ್ನಿಯಾದ ಅಚ್ಚಮ್ಮನವರ ಸೀಮಂತ ಸಮಾರಂಭವಿದ್ದುದ್ದರಿಂದ ಮನೆ ತುಂಬ ನೆಂಟರಿಷ್ಟರು ಸೇರಿದ್ದರು. ಅನಾಯಾಸವಾಗಿ ಆಚಾರಶೀಲರಾದ ಹರಿದಾಸರು ಮನೆಗೆ ದಯಮಾಡಿಸಿರುವುದು ತಮ್ಮ ಭಾಗ್ಯವೆಂದೇ ತಿಳಿದು ಶೇಷಪ್ಪನವರು ಆ ದಿವಸ ತಮ್ಮ ಮನೆಯಲ್ಲಿಯೇ ದೇವತಾರ್ಚನೆ ಮತ್ತು ತೀರ್ಥಪ್ರಸಾದ ಸ್ವೀಕಾರ ಮಾಡುವಂತೆ ಪ್ರಾರ್ಥಿಸಿದರು. ಶೇಷಪ್ಪನವರ ವಿನಯಾದಿ ಸದ್ಗುಣಗಳನ್ನು ಕಂಡು ದಾಸರು ಅವರ ಮನೆಯಲ್ಲಿ ದೇವತಾರ್ಚನೆಯನ್ನು ನೆರವೇರಿಸಲು ಸಂತೋಷದಿಂದ ಸಮ್ಮತಿಸಿದರು. ದಾಸರ ನೇಮದಂತೆ ನೈವೇದ್ಯ ಮತ್ತು ಹಸ್ತೋದಕಗಳಿಗಾಗಿ ಅವರ ಶಿಷ್ಯರಿಂದ ಪ್ರತ್ಯೇಕ ಅಡಿಗೆ ತಯಾರಾಯಿತು. ವೇದ ಘೋಷ ಮತ್ತು ನಗಾರಿ ವಾದ್ಯಗಳ ನಡುವೆ ಯತಿಗಳಂತೆ ಶ್ರೀಮುದ್ದುಮೋಹನ ದಾಸರು ನಡೆಸಿದ ದೇವರ ಪೂಜೆ ಅಲ್ಲಿ ನೆರೆದಿದ್ದವರ ಕಣ್ಮನಗಳನ್ನು ತಣಿಸಿತು. ಭೋಜನಾನಂತರ ದಾಸರು ಮುಂದೆ ತುಮಕೂರಿಗೆ ಹೊರಡುವ ಮುನ್ನ ಅಲ್ಲಿಯೇ ಸ್ವಲ್ಪ ಸಮಯ ವಿಶ್ರಮಿಸಿಕೊಂಡರು.

## ಅಂಕಿತ ಸ್ವೀಕಾರ – ತಪಶ್ಚರ್ಯೆ

ಯಾವ ವಸ್ತುವನ್ನು ಕಣ್ಣಿಗೆ ಎಣ್ಣೆಬಿಟ್ಟುಕೊಂಡು ಹುಡುಕುತ್ತಿದ್ದರೋ ಆ ವಸ್ತು ತಾನಾಗಿ ಕರಗತವಾದಾಗ ಹೇಗಾಗಿರಬೇಡ. ಅನಾಯಾಸವಾಗಿ ತಮ್ಮ ಮನೆಗೆ ಬಂದ ಹರಿದಾಸರು ದೊಡ್ಡಬಳ್ಳಾಪುರದ ಶ್ರೀಮುದ್ದುಮೋಹನದಾಸರು ಎಂದು ಕೇಳಿದ ತಕ್ಷಣ ಸುಬ್ಬರಾಯರ ಹೃನ್ಮಂದಿರದಲ್ಲಿ ನೂರಾರು ಮಿಂಚುಗಳು ಒಮ್ಮೆಲೇ ಮಿಂಚಿದಂತಾಯ್ತು. ಯಾವ ಗುರುವನ್ನು ಕಾಣಲು ತಾವು ಹಗಲಿರಳೂ ಹಂಬಲಿಸುತ್ತಿದ್ದರೋ, ಯಾವ ಗುರುವಿನಿಂದ ಅಂಕಿತೋಪದೇಶ ವನ್ನು ಪಡೆದು ಹರಿದಾಸ ದೀಕ್ಷೆ ಸ್ವೀಕರಿಸಲು ದೇವರಾಯನದುರ್ಗದ ರಥೋತ್ಸವದಲ್ಲಿ ಪರಿಚಯವಾದ ತೇಜಸ್ವೀ ಬ್ರಾಹ್ಮಣನು ಸೂಚಿಸಿದ್ದನೋ ಆ ಗುರು ದುತ್ತನೆ ತಮ್ಮ ಕಣ್ಣ ಮುಂದೆಯೇ ಬಂದು ನಿಂತಾಗ ಸುಬ್ಬರಾಯರಿಗಾದ ಆನಂದ ಹೇಳತೀರದು. ಬದುಕಿನ ಸಾರ ಸರ್ವಸ್ವವೂ ಏಕಕಾಲದಲ್ಲಿ ಲಭಿಸಿ ದಂತೆ ಪುಳಕಿತರಾದರು. ಭೋಜನಾನಂತರ ವಿಶ್ರಾಂತಿ ಪಡೆಯುತ್ತಿದ್ದ ದಾಸರು ಎಚ್ಚರಗೊಳ್ಳುವವರೆಗೂ ಕಾದಿದ್ದು ಏಕಾಂತದಲ್ಲಿ ಅವರ ದರ್ಶನವನ್ನು ಪಡೆದು

ತಮ್ಮ ಪರಿಚಯವನ್ನು ಹೇಳಿಕೊಂಡರು. ದಾಸರ ಒಪ್ಪಿಗೆ ಪಡೆದು ಬೀಸಣಿಕೆಯಿಂದ ಗಾಳಿಬೀಸುತ್ತಾ ಅವರ ಆಯಾಸ ಪರಿಹರಿಸಿದರಲ್ಲದೆ ಅವರ ಕಾಲುಗಳನ್ನು ಹಿತವೆನಿಸುವಂತೆ ಮೃದುವಾಗಿ ಒತ್ತಿ ಶ್ರದ್ಧೆಯಿಂದ ಶುಶ್ರೂಷೆ ಮಾಡುತ್ತಾ ದಾಸರ ಮನಸ್ಸನ್ನು ಸಂತೋಷಪಡಿಸಿದರು. ನಂತರ ದಿಂಡುರುಳಿದ ಬಾಳೆಯಂತೆ ಗುರುಗಳಿಗೆ ಸಂಪೂರ್ಣ .ಶರಣಾಗಿ ಅವರ ಪಾದಪದ್ಮಗಳನ್ನು ಹಿಡಿದು ತಮ್ಮ ಅಂತರಂಗದ ತುಮುಲಗಳನ್ನು ನಿವೇದಿಸಿಕೊಳ್ಳುತ್ತಾ ಧಾರೆ ಧಾರೆಯಾಗಿ ಕಣ್ಣೀರು ಸುರಿಸಿದರು. ದಾಸತ್ವವನ್ನು ಸ್ವೀಕರಿಸಲು ತಮಗಿರುವ ಆಸಕ್ತಿಯನ್ನೂ, ಕರಿಗಿರಿಯ ರಥೋತ್ಸವದ ಸಂದರ್ಭದಲ್ಲಿ ತಮಗುಂಟಾದ ಅನುಭವವನ್ನೂ ತಿಳಿಯಪಡಿಸಿ ಕರುಣೆಯಿಂದ ಅಂಕಿತೋಪದೇಶ ನೀಡಿ ಉದ್ಧರಿಸಬೇಕೆಂದು ವಿನೀತರಾಗಿ ಪ್ರಾರ್ಥಿಸಿದರು.

ಸುಬ್ಬರಾಯರ ಮನೋದಾರ್ಢ್ಯ ಮತ್ತು ದಾಸದೀಕ್ಷಾಕಾಂಕ್ಷೆಯನ್ನು ಕಂಡು ಮುದ್ದುಮೋಹನದಾಸರಿಗೆ ತುಂಬಾ ಸಂತೋಷವಾಯಿತು. ಯೌನಾವಸ್ಥೆಯಲ್ಲಿದ್ದರೂ ಸಾಂಸಾರಿಕ ವಿಷಯಗಳಿಗೆ ಅಂಟಿಕೊಳ್ಳದೆ ವೈರಾಗ್ಯದಿ ಸದ್ಗುಣಭರಿತನಾಗಿ ತೊಟ್ಟು ಕಳಚಿದ ಹಣ್ಣಿನಂತೆ ಪರಿಪಕ್ವ ಸ್ಥಿತಿಯಲ್ಲಿರುವ ಸುಬ್ಬರಾಯರನ್ನು ಕಂಡು ದಾಸರ ಹೃದಯ ತುಂಬಿ ಬಂದಿತು. ಆದರೂ ಅದನ್ನು ಹೊರಗೆ ತೋರಗೊಡದೆ ಪಾದಕ್ರಾಂತನಾದ ಶಿಷ್ಯನನ್ನು ಮೈದಡವಿ ಎಬ್ಬಿಸಿದರು. “ದಾಸದೀಕ್ಷೆಯನ್ನು ಸ್ವೀಕರಿಸುವ ತಮ್ಮ ಉದ್ದೇಶ ಸಾಧುವಾದದ್ದೇ. ಆದರೆ ಸತತವಾಗಿ ಗುರುಗಳ ಸೇವೆಯನ್ನು ಮಾಡದೆ ಸಾಧನೆಗೆ ಕಾರಣವಾಗುವ ಉಪದೇಶ ಸುಲಭವಾಗಿ ಲಭ್ಯವಾಗುವುದಿಲ್ಲ” ಎಂದು ತಿಳಿಸಿ ಮುಂದೆ ಪ್ರಯಾಣ ಬೆಳೆಸಲು ಉತ್ಸುಕರಾದರು. ಸುಬ್ಬರಾಯರ ತಂದೆಯವರಾದ ಶ್ರೀಶೇಷಪ್ಪ ಹಾಗೂ ಅವರ ಕುಟುಂಬವರ್ಗವನ್ನು ಮತ್ತೊಮ್ಮೆ ಆಶೀರ್ವದಿಸಿ ನರಸೀಪುರದ ಭಕ್ತವೃಂದವನ್ನು ಬೀಳ್ಕೊಂಡು ದಾಸರು ಕುದುರೆಯನ್ನೇರಿದರು. ಹಸಿಬೆ ಚೀಲಗಳನ್ನು ಹೊತ್ತ ಅವರ ಶಿಷ್ಯರು ಹಿಂದೆ ನಡೆದರು. ದಾಸರಿಗೆ ತುಮಕೂರು ಮಾರ್ಗ ಅಷ್ಟಾಗಿ ಪರಿಚಯವಿಲ್ಲದ ಕಾರಣ ಅವರಿಗೆ ತುಮಕೂರಿನ ಹೆದ್ದಾರಿ ತೋರಿಸುವ ಅವಕಾಶ ಸುಬ್ಬರಾಯರಿಗೆ ಪ್ರಾಪ್ತವಾಯಿತು. ಅಂಕಿತೋಪದೇಶ ನೀಡಿ ಉದ್ಧರಿಸಬೇಕೆಂಬ ತಮ್ಮ ಪ್ರಾರ್ಥನೆಗೆ ಗುರುಗಳು ಅಷ್ಟಾಗಿ ಉತ್ಸಾಹ ತೋರದಿದ್ದನ್ನು ಕಂಡು ಅವರಿಗೆ ತೀವ್ರ ನಿರಾಸೆಯುಂಟಾದರೂ ತಮ್ಮ ಪ್ರಯತ್ನವನ್ನು ನಿಲ್ಲಿಸಲಿಲ್ಲ. ದೇವ

ದುರ್ಲಭರಾದ ಇಂತಹ ಮಹಾತ್ಮರ ಅನುಗ್ರಹವನ್ನು ಹೇಗಾದರೂ ಸಂಪಾದಿಸಬೇಕೆಂಬ ಅದಮ್ಯ ಆಕಾಂಕ್ಷೆ ಅವರಲ್ಲಿ ಮೂಡಿತು. ಕುದುರೆಯನ್ನೇರಿ ಕುಳಿತ ದಾಸರ ಪಕ್ಕದಲ್ಲಿ ಬರಿಗಾಲಿನಲ್ಲಿ ಕುದುರೆ ನಡಿಗೆಯ ಸಮಕ್ಕೆ ಬಿರುಸಾಗಿ ಹೆಜ್ಜೆ ಹಾಕಿ ನಡೆಯುತ್ತಾ, ಗುರುವನುಗ್ರಹವನ್ನು ಕರುಣಿಸಬೇಕೆಂದು ಕರಿಗಿರಿಯ ರಥೋತ್ಸವದ ಸಂದರ್ಭದಲ್ಲಿ ಮಾರ್ಗದರ್ಶನ ಮಾಡಿಸಿದ ಶ್ರೀಲಕ್ಷ್ಮೀನರಸಿಂಹ ಸ್ವಾಮಿಯನ್ನು ಮನಸ್ಸಿನಲ್ಲಿಯೇ ಸುಬ್ಬರಾಯರು ಪರಿಪರಿಯಾಗಿ ಪ್ರಾರ್ಥಿಸ ತೊಡಗಿದರು. ತುಮಕೂರಿನ ಹೆದ್ದಾರಿ ಗೋಚರಿಸುತ್ತಿದ್ದಂತೆ ದಾಸರು ಕುದುರೆಯನ್ನು ನಿಲ್ಲಿಸಿ 'ಸುಬ್ಬಣ್ಣಾ ಇನ್ನು ಪರವಾಗಿಲ್ಲ. ನಾವು ಮುಂದೆ ಹೊರಡುತ್ತೇವೆ. ನೀನಿನ್ನು ಮನೆಗೆ ಹಿಂದಿರುಗು' ಎಂದು ಸೂಚಿಸಿದರು. ಈ ಮಾತನ್ನು ಕೇಳುತ್ತಿದ್ದಂತೆ ಸುಬ್ಬರಾಯರಿಗೆ ಸಹಿಸಲಸದಳವಾದ ಮನೋವೇದನೆಯುಂಟಾಯಿತು. ತಾನಾಗಿ ಪ್ರಾಪ್ತವಾಗಿದ್ದ ಸುವರ್ಣಾವಕಾಶ ವೊಂದು ಕಣ್ಣೆದುರಿಗೇ ಕರಿಗಿ ಹೋಗುತ್ತಿರುವ ಅನುಭವವಾಯಿತು. ಅವರು ದುಃಖಾತಿಶದಿಂದ ಕಂಬನಿ ಸುರಿಸುತ್ತಾ ದಾಸರ ಪಾದಗಳನ್ನು ಭದ್ರವಾಗಿ ಹಿಡಿದು "ಈ ಅಲ್ಪನನ್ನು ಕೃಪೆಯಿಟ್ಟು ಅನುಗ್ರಹಿಸಿ ಉದ್ಧರಿಸಬೇಕು" ಎಂದು ಪುನಃ ಪುನಃ ಪ್ರಾರ್ಥಿಸತೊಡಗಿದರು. ಸುಬ್ಬರಾಯರ ಮನಃಸ್ಥಿತಿಯನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ ದಾಸರಿಗೆ 'ಇನ್ನು ಶಿಷ್ಯನನ್ನು ಪರೀಕ್ಷಿಸಬಾರದು' ಅನ್ನಿಸಿತು. ಅವರು ಪ್ರಸನ್ನಚಿತ್ತರಾಗಿ ಸುಬ್ಬರಾಯರ ತಲೆಯನ್ನು ವಾತ್ಸಲ್ಯದಿಂದ ನೇವರಿಸುತ್ತಾ 'ಆಯಿತು, ಚಿಂತಿಸಬೇಡ, ನಿನ್ನ ಮನೋದಾರ್ಢ್ಯ ಶ್ರದ್ಧಾಭಕ್ತಿಗಳನ್ನು ಕಂಡು ನಮಗೆ ತುಂಬಾ ಸಂತೋಷವಾಗಿದೆ. ನಾವು ಇನ್ನೂ ಮೂರು ದಿವಸ ತುಮಕೂರಿನ ವ್ಯಾಸರಾಜ ಮಠದಲ್ಲಿ ಬಿಡಾರ ಮಾಡುವರಿದ್ದೇವೆ. ನೀನು ನಾಳೆ ಬೆಳಿಗ್ಗೆ ಅಲ್ಲಿಗೇ ಬಂದು ನಮ್ಮನ್ನು ಕಾಣು. ನಿನ್ನ ಮನೋರಥ ನೆರವೇರುವುದು' ಎಂಬ ಆಶ್ವಾಸನೆ ನೀಡಿದರು.

ಅಮೃತಸೇಚನದಂತಿದ್ದ ಗುರುಗಳ ಅನುಗ್ರಹವಾಣಿಯನ್ನು ಕೇಳಿ ಸುಬ್ಬರಾಯರಿಗೆ ತುಂಬಾ ಸಂತೋಷವಾಯಿತು. ಅವರು ಮರುದಿವಸ ಬ್ರಾಹ್ಮೀ ಮುಹೂರ್ತಕ್ಕೇ ಸ್ವಗ್ರಾಮವನ್ನು ಬಿಟ್ಟು ತುಮಕೂರು ತಲುಪಿ ಅಲ್ಲಿನ ಶ್ರೀವ್ಯಾಸರಾಜ ಮಠದಲ್ಲಿ ಬಿಡಾರ ಮಾಡಿದ್ದ ದಾಸರಾಯರನ್ನು ಭೇಟಿ ಮಾಡಿದರು. ದಾಸರು ತಮ್ಮ ದೇವತಾರ್ಚನೆಯ ನಂತರ ಶಿಷ್ಯನನ್ನು ಕರೆದು

ಆತನ ಶಿರದ ಮೇಲೆ ತಮ್ಮ ಪವಿತ್ರವಾದ ಹಸ್ತವನ್ನಿಟ್ಟು ಶಾಂತಚಿತ್ತರಾಗಿ ತಮ್ಮ ಬಿಂಬಮೂರ್ತಿಯನ್ನು ಹೀಗೆ ಪ್ರಾರ್ಥಿಸುತ್ತಾ ಅಂಕಿತೋಪದೇಶ ಮಾಡಿದರು:

"ತಂದೆ ಮುದ್ದುಮೋಹನ ವಿಠಲ ಸಲಹಬೇಕಿವನ ||ಪ||
ಕಂದುಗೊರಳನ ಪ್ರಿಯನೆ ಅಭಿನಂದಿಪೆನು ಸತತ ||ಅ.ಪ||

ಶೋಕನಾಶಕ ವಿಗತ ಶೋಕನಯ್ಯನೆ ವೇಗ
ವಾಕ್ಕು ಮೊದಲಾದ ಸರ್ವೇಂದ್ರಿಯಗಳಲ್ಲಿ ನಿಂತು।
ಲೋಕದೊಳಗೆ ಇವಗೆ ಬೇಕಾದ ವರಗಳನ್ನಿತ್ತು
ಲೌಕಿಕ ಮಾರ್ಗವ ಬಿಡಿಸೋ ನಾಕಜನಪಿತನೇ ||೧||

ಜ್ಞಾನಭಕ್ತಿ ವೈರಾಗ್ಯಗಳನ್ನೆಲ್ಲವೂ ಇತ್ತು
ಜ್ಞಾನಿಗಳ ಸಹವಾಸದೊಳಗೆ ರತಿಯನೆ ಕೊಟ್ಟು।
ಹಾನಿವೃದ್ಧಿಗಳು ಏನೇನು ಬಂದರೂ
ಆನಂದವನೆ ಕೊಟ್ಟು ರಕ್ಷಿಸೋ ನರಹರೇ ||೨||

ಕಾಮಕ್ರೋಧಮದ ಮತ್ಸರಗಳ ಕಡಿದು
ನಾಮೋಚ್ಚಾರಣೆಯೆಂಬ ವಜ್ರ ಕವಚವನೆ ತೊಡಿಸಿ।
ತಾಮರಸವಂದ್ಯಾ ಸಿರಿ ಮುದ್ದುಮೋಹನ ವಿಠಲ
ಕಾಮಿತಾರ್ಥವ ಕೊಡೋ ಹೃತ್ಪದ್ಮದೊಳಗೆ ಪೊಳೆದು ||೩||

ಹೀಗೆ ಸುಬ್ಬರಾಯರು 'ಮುದ್ದುಮೋಹನದಾಸರ। ಮುದ್ದು ಶಿಷ್ಯರು ಆಗಿ ತಂದೆ। ಮುದ್ದು ಮೋಹನರೆಂಬ ಅಂಕಿತ ಪಡೆದು' ಹರಿದಾಸರಾದರು. ಶ್ರೀವರವಿಠಲದಾಸರ ಕರಕಮಲ ಸಂಜಾತರಾದ ಶ್ರೀ ಮುದ್ದುಮೋಹನ ದಾಸರೇಣ್ಯರಿಂದ ದಾಸತ್ವ ಸ್ವೀಕರಿಸಿ ಶ್ರೀವಿಜಯದಾಸರ ಪಾವನ ಪೀಳಿಗೆಯಲ್ಲಿ ವಿರಾಜಮಾನರಾದರು.[1]

---

1. ಶ್ರೀಮುದ್ದುಮೋಹನದಾಸರಿಗೆ ಶ್ರೀ ತಂದೆ ಮುದ್ದುಮೋಹನದಾಸರಲ್ಲದೆ ಶ್ರೀಹಯಗ್ರೀವ ವಿಠಲದಾಸರು, ಶ್ರೀಬಾಲಕೃಷ್ಣ ವಿಠಲದಾಸರು, ಶ್ರೀಕರುಣಾಕರ ವಿಠಲದಾಸರು, ಶ್ರೀವಿಜಯಮೋಹನ ವಿಠಲದಾಸರು, ಶ್ರೀಗರುಡವಾಹನ ವಿಠಲದಾಸರು, ಶ್ರೀವಾಮನ ವಿಠಲದಾಸರು, ಶ್ರೀಗೋಪೀನಾಥ ವಿಠಲದಾಸರು, ಶ್ರೀವಿಜಯಸಾರಥಿ ವಿಠಲದಾಸರು, ಶ್ರೀರಮಣ ವಿಠಲದಾಸರು ಮತ್ತು ಶ್ರೀ ಒಡೆಯಮೋಹನ ವಿಠಲದಾಸರು ಎಂಬ ಇನ್ನೂ ಹತ್ತು ಮಂದಿ ಶಿಷ್ಯರಾಗಿರುತ್ತಾರೆಂದು ತಿಳಿದು ಬಂದಿದೆ.

ಸುಬ್ಬರಾಯರು ಶ್ರೀ ಮುದ್ದುಮೋಹನದಾಸರಿಂದ ಅಂಕಿತೋಪದೇಶವನ್ನು ಪಡೆದು ತಂದೆ ಮುದ್ದುಮೋಹನದಾಸರಾದ ನಂತರ ಅವರ ಚಿತ್ತವೃತ್ತಿಯೇ ಬದಲಾಯಿತು. ಅತ್ತ ಇತ್ತ ಚಡಪಡಿಸುತ್ತಿದ್ದ ಮನಸ್ಸು ಶಾಂತವಾಯಿತು. ಅನಗತ್ಯ ಕಳವಳಗಳು ಗುರುಕೃಪೆಯಿಂದ ಕಾಣದಾದವು. ದಾಸರಿಗೆ ಹೃದಯದಲ್ಲಿಯೇ ಬಿಂಬಮೂರ್ತಿಯನ್ನು ಕಂಡುಕೊಳ್ಳುವ ಅಪೇಕ್ಷೆ ಪ್ರಬಲವಾಯಿತು. ದಿನಪ್ರತಿ ನಡೆಸುವ ಸಕಲ ಕ್ರಿಯೆಗಳನ್ನೂ ಬಿಂಬಮೂರ್ತಿಗೆ ಅರ್ಪಿಸುವ ಪರಿಪಾಠ ರೂಢಿಯಾಯಿತು. ಅವರಲ್ಲಿ ಬಾಲ್ಯದಿಂದಲೂ ಮನೆಮಾಡಿಕೊಂಡಿದ್ದ ಸ್ವಭಾವ ಸಹಜವಾದ ವೈರಾಗ್ಯಭಾವ ಮತ್ತಷ್ಟು ಉತ್ಕಟ ಸ್ವರೂಪವನ್ನು ಪಡೆದು ಕೊಂಡಿತು. ತಾವಿದ್ದಲ್ಲಿಗೇ ಹುಡುಕಿಕೊಂಡುಬಂದು ಅಂಕಿತೋಪದೇಶ ನೀಡಿದ ಗುರುಗಳ ಕಾರುಣ್ಯವನ್ನು ನೆನೆದು ಅವರ ಹೃದಯ ತುಂಬಿಬಂದಿತು. ಗುರುಗಳು ಅನುಗ್ರಹಿಸಿದ ಅಂಕಿತೋಪದೇಶವನ್ನು ಸಿದ್ಧಿಮಾಡಿಕೊಂಡು ಅಲೌಕಿಕ ಜ್ಞಾನವನ್ನು ಪಡೆಯಲು ತಂದೆ ಮುದ್ದುಮೋಹನದಾಸರು ನಿರ್ಧರಿಸಿದರು. ಈ ಸಾಧನೆಗಾಗಿ ಅವರ ಮನಸ್ಸು ಮತ್ತೆ ಏಕಾಂತವನ್ನು ಹುಡುಕಿಕೊಂಡು ಹೊರಟಿತು.

ತಂದೆ ಮುದ್ದುಮೋಹನದಾಸರು ನರಸೀಪುರದ ಸುತ್ತಮುತ್ತಲಿನ ಗುಡ್ಡಗಾಡುಗಳ ಗುಹೆಗಳಲ್ಲಿ ತಪಶ್ಚರ್ಯೆಯಲ್ಲಿ ನಿರತರಾದರು. ದೇವರಾಯನ ದುರ್ಗದ ಶ್ರೀಲಕ್ಷ್ಮೀನರಸಿಂಹ ದೇವರಿಗೆ ಅಭಿಮುಖವಾಗಿರುವ ರಾಮದೇವರ ಬೆಟ್ಟದಲ್ಲಿನ ರಾಮಗುಹಾದಲ್ಲಿ ದಾಸರು ಹೆಚ್ಚು ವಾಸ ಮಾಡಲು ಪ್ರಾರಂಭಿಸಿದರು. ನಿರ್ಜನವಾದ ಏಕಾಂತ ಸ್ಥಳದಲ್ಲಿದ್ದ ರಾಮಗುಹೆಯ ಸಮೀಪದಲ್ಲಿಯೇ ಪವಿತ್ರವಾದ ಬಾಣತೀರ್ಥವೂ ಇದ್ದುದ್ದರಿಂದ ಆ ಪ್ರದೇಶ ದಾಸರ ಸ್ನಾನಾಹ್ನೀಕಗಳಿಗೆ ಅನುಕೂಲಕರವಾಗಿತ್ತು. ಗುರು ಕೊಟ್ಟ ಬಿಂಬವನ್ನು ಎದೆ ತುಂಬಾ ತುಂಬಿಕೊಂಡು ದಾಸರು ಕಠಿಣ ತಪಸ್ಸಾಧನೆಯಲ್ಲಿ ತೊಡಗಿದರು. ಮುದ್ದುಮೋಹನ ವಿಠಲಾತ್ಮಕನಾದ ಶ್ರೀತಂದೆ ಮುದ್ದುಮೋಹನ ವಿಠಲನನ್ನು ಧ್ಯಾನಿಸುತ್ತಾ ಯೋಗ ಸಮಾಧಿಯ ಉತ್ತುಂಗ ಸ್ಥಿತಿಯನ್ನು ದಾಸರು ತಲುಪಿದರು. ಗುರು ಕಾರುಣ್ಯದಿಂದ ದಾಸರ ಅಂತರಂಗದ ಕದ ವಿಶಾಲವಾಗಿ ತೆರೆದು ಅರಿವಿನ ಆತ್ಮಜ್ಯೋತಿ ಪ್ರಜ್ವಲಿಸಿತು. ಯಾವ ಜ್ಞಾನದಿಂದ ಹುರಿದ ಬೀಜದಂತಾಗಿ ಹುಟ್ಟು ಸಾವುಗಳನ್ನು ಮೀರಿದ ಸ್ಥಿತಿಯನ್ನು

ಪಡೆದುಕೊಳ್ಳಬಹುದೋ; ಯಾವ ಜ್ಞಾನದಿಂದ ಅಣುರೇಣು ತೃಣಕಾಷ್ಟಗಳಲ್ಲಿ ಪರಿಪೂರ್ಣನಾಗಿ, ಸೃಷ್ಟಿ ಸ್ಥಿತಿ ಲಯಕ್ಕೆ ಕಾರಣನಾಗಿರುವ ಆ ಸರ್ವೋತ್ತಮನಾದ ಗೋವಿಂದನನ್ನು ಸಾಕ್ಷಾತ್ಕರಿಸಿಕೊಳ್ಳಬಹುದೋ ಅಂತಹ ಅಪರೋಕ್ಷ ಜ್ಞಾನ ದಾಸರ ಕರಗತವಾಯಿತು. 'ಅಂತರ್ಮುಖಿತ್ವದಿ ಮಂತ್ರಸಿದ್ಧಿಯು' ಲಭಿಸಿತು. ಬಿಂಬಮೂರ್ತಿಯ ಮಧುರಾನುಭವದಿಂದ ತಂದೆ ಮುದ್ದುಮೋಹನದಾಸರು ಪುಳಕಿತರಾಗಿ ಅಪೂರ್ವವಾದ ಆನಂದವನ್ನು ಸೂರೆಗೊಂಡರು.

ಹೀಗೆ ಕಠಿಣವಾದ ತಪಶ್ಚರ್ಯೆಯಿಂದ ಬಿಂಬಾಪರೋಕ್ಷವನ್ನು ಪಡೆದ ನಂತರ ತಂದೆ ಮುದ್ದುಮೋಹನ ದಾಸರಿಗೆ ತಮ್ಮ ಅವತಾರದ ಉದ್ದೇಶ ಸ್ಪಷ್ಟವಾಯಿತು. ಕರ್ತವ್ಯ ಅವರನ್ನು ಕೈಬೀಸಿ ಕರೆಯಿತು. ಗುರುವಾಜ್ಞೆಯಿಂದ ನಶಿಸಿ ಹೋಗುತ್ತಿದ್ದ ಹರಿದಾಸ ಪರಂಪರೆಗೆ ಪುನಶ್ಚೇತನ ನೀಡಿ ದಾಸ ಸಾಹಿತ್ಯ ಪುಷ್ಪ ಪರಿಪೂರ್ಣವಾಗಿ ಪರಿಮಳ ಸೂಸಿ ಅರಳುವಂತೆ ಮಾಡಲು ಸಂಕಲ್ಪಿಸಿ ಹರಿನಾಮಾಮೃತದ ಜೀವಜಲವನ್ನು ದಾಸವೃಕ್ಷಕ್ಕೆ ಸಮೃದ್ಧವಾಗಿ ಎರೆಯುವ ಮಹತ್ಕಾರ್ಯಕ್ಕೆ ದಾಸರು ಮುಂದಾದರು. ಹರಿದಾಸ ಪರಂಪರೆಯ ಕಲ್ಪವೃಕ್ಷ ಸಾವಿರಾರು ಟೊಂಗೆ ಟಿಸಿಲೊಡೆದು ಎಂದೆಂದಿಗೂ ಬಾಡದಂತೆ ಅದನ್ನು ಅವಿರತವಾಗಿ ಪೋಷಿಸಬೇಕೆಂದೂ, ಅದರ ತಂಪಾದ ನೆರಳು ಮತ್ತು ಮಧುರ ಫಲಗಳನ್ನು ಅಸಂಖ್ಯಾತ ಸುಜೀವಿಗಳು ಸೇವಿಸಿ ಆತ್ಮೋದ್ಧಾರದ ಹೆದ್ದಾರಿ ಕಂಡುಕೊಳ್ಳುವಂತೆ ಮಾಡಬೇಕೆಂದೂ ತಂದೆ ಮುದ್ದುಮೋಹನದಾಸರು ನಿರ್ಧರಿಸಿದರು.

## ಸಾಧು ಹೃದಯ

ತಪಸ್ಸಿದ್ಧಿಯನ್ನು ಪಡೆದ ನಂತರ ತಂದೆ ಮುದ್ದುಮೋಹನದಾಸರು ನರಸೀಪುರದ ತಮ್ಮ ಮನೆಗೆ ಮರಳಿ ಬಂದರು. "ಕೋಟಿಗಾದರು ಕೇಳು ಅಪರೋಕ್ಷಿಗಾದರೂ ಕೋಟಲೆಯೊಳಗಿರದೆ ಗತಿಯಿಲ್ಲ! ತಾಟತೂಟಕವ ಮಾಡಿ ಅವರಂತೆ ನುಡಿದು ಭವದಾಟಬೇಕೋ" ಎಂದು ಶ್ರೀವಿಜಯದಾಸರು ಹೇಳಿರುವಂತೆ ನಡೆದುಕೊಂಡ ಅವರು ತಮ್ಮ ಅಂತಸ್ಸತ್ವವನ್ನು ಪ್ರಕಟಮಾಡಲಿಲ್ಲ. ಸುಬ್ರಹ್ಮಣ್ಯೇಶ್ವರನ ವರಪ್ರಸಾದಿಂದ ಜನಿಸಿದ ತಮ್ಮ ಏಕಮಾತ್ರ ಪುತ್ರ ಸಂಸಾರದಲ್ಲಿ ಆಸಕ್ತನಾಗದೆ ಮತ್ತೆ ಕಾಡುಮೇಡುಗಳಲ್ಲಿ

ಅಲೆಯುತ್ತಿದ್ದುದ್ದನ್ನು ಕಂಡು ದಾಸರ ತಂದೆ ತಾಯಿಗಳು ವ್ಯಾಕುಲಚಿತ್ತರಾಗಿದ್ದರು. ಮಗ ಮರಳಿಮನೆಗೆ ಬಂದಾಗ ಅವರಿಗೆ ತುಂಬಾ ಸಂತೋಷವಾಯಿತು. ಆದರೆ ವೃದ್ಧಾಪ್ಯದ ಅಂಚಿನಲ್ಲಿದ್ದ ಅವರು ಹೆಚ್ಚು ಕಾಲ ಬದುಕಲಿಲ್ಲ. ಅಸ್ವಸ್ಥರಾಗಿ ಹಾಸಿಗೆ ಹಿಡಿದರು. ಕತ್ತಲು ತುಂಬಿದ ಅಸಂಖ್ಯಾತ ಹೃದಯಗಳಿಗೆ ಬೆಳಕು ನೀಡಬಲ್ಲ ದಿವ್ಯ ಜ್ಯೋತಿಯನ್ನು ಜಗತ್ತಿಗೆ ಒದಗಿಸಲು ಕಾರಣವಾದ ಆ ಪುಣ್ಯಾತ್ಮರು ಸ್ವಲ್ಪ ಸಮಯದಲ್ಲಿಯೇ ಹರಿಸ್ಮರಣೆ ಮಾಡುತ್ತಾ ಪರಂಧಾಮವನ್ನು ಸೇರಿದರು.

ಜನ್ಮವಿತ್ತವರ ಅಗಲಿಕೆ ತಂದೆ ಮುದ್ದುಮೋಹನದಾಸರಿಗೆ ಅಪಾರ ವೇದನೆಯನ್ನುಂಟು ಮಾಡಿತು. ದಾಸರಿಗೆ ಮತ್ತೊಂದು ಆಘಾತ ಕಾದಿತ್ತು. ಇದೇ ಸುಮಾರಿಗೆ ದಾಸರ ಗುರುಗಳಾದ ದೊಡ್ಡಬಳ್ಳಾಪುರದ ಶ್ರೀಮುದ್ದುಮೋಹನದಾಸರೂ ಹರಿಲೋಕಕ್ಕೆ ಪ್ರಯಾಣ ಮಾಡಿದರು. ವಾತ್ಸಲ್ಯದಿಂದ ತಾವಿದ್ದಲ್ಲಿಗೇ ಬಂದು ಅಂಕಿತೋಪದೇಶ ನೀಡಿ

**"ಕಾಮ ಕ್ರೋಧ ಮದ ಮತ್ಸರಗಳ ಕಡಿದು**
**ನಾಮೋಚ್ಚಾರಣೆಯೆಂಬ ವಜ್ರ ಕವಚವನೆ ತೊಡಿಸಿ**
**ತಾಮರಸವಂದ್ಯಾ ಸಿರಿ ಮುದ್ದುಮೋಹನ ವಿಠಲ**
**ಕಾಮಿತಾರ್ಥವ ಕೊಡೋ ಹೃತ್ಪದ್ಮದೊಳಗೆ ಪೊಳೆದು॥"**

ಎಂದು ತಮಗಾಗಿ ತಮ್ಮ ಬಿಂಬಮೂರ್ತಿಯನ್ನು ಪ್ರಾರ್ಥಿಸಿ ಅನುಗ್ರಹಿಸಿದ ಆ ಪರಮ ಕಾರುಣ್ಯ ಮೂರ್ತಿಯನ್ನು ಕಳೆದುಕೊಂಡು ದಾಸರು ತೀವ್ರವಾಗಿ ಪರಿತಪಿಸಿದರು. ಗುರುಗಳ ಅಗಲಿಕೆ ಅವರನ್ನು ಇನ್ನಷ್ಟು ಹಣ್ಣು ಮಾಡಿತು. ಆದರೆ ಜ್ಞಾನಿಗಳಾದ ದಾಸರು "ಯಾವ ಕಾಲ ತಪ್ಪಿಸಿದರೂ ಸಾವ ಕಾಲ ತಪ್ಪಿಸನು" ಎಂಬ ವಿಜಯದಾಸರ ವಾಕ್ಯವನ್ನು ನೆನೆದು ಅಗತ್ಯ ಸ್ಮರಣೆಯನ್ನು ತಂದುಕೊಂಡರು. ಶ್ರದ್ಧೆಯಿಂದ ಮುಂದೆ ಮಾಡಬೇಕಾದ ಕಾರ್ಯಗಳನ್ನೆಲ್ಲಾ ಸಾಂಗವಾಗಿ ನೆರವೇರಿಸಿದರು.

ಸಂಸಾರದ ಸಂಪೂರ್ಣ ಜವಾಬ್ದಾರಿ ಈಗ ದಾಸರ ಮೇಲೆ ಬಿತ್ತು. ತಂದೆಯವರು ಮಾಡಿಟ್ಟಿದ್ದ ಆಸ್ತಿಯನ್ನು ಮೂಲವಾಗಿಟ್ಟುಕೊಂಡು ಅವರು ನರಸೀಪುರದಲ್ಲಿಯೇ ಸ್ವಂತ ಉದ್ದಿಮೆಯನ್ನು ಹೂಡಿದರು. ಪ್ರಾರಂಭದಲ್ಲಿ

ಲೇವಾದೇವಿಯಲ್ಲಿ ನಿರತರಾಗಿದ್ದ ಅವರು ನಂತರ ಋತು ಧರ್ಮಕ್ಕನುಗುಣವಾಗಿ ಹಣ್ಣು-ಹಂಪಲಗಳನ್ನು, ಕಂಬಳಿ ಮತ್ತು ಇತರ ಜವಳಿ ಪದಾರ್ಥಗಳನ್ನು ವ್ಯಾಪಾರ ಮಾಡತೊಡಗಿದರು. ಆದರೆ ಸಾಧು ಹೃದಯದ ದಾಸರಿಗೆ ವ್ಯಾಪಾರಗುಣ ಹೊಂದಿಕೆಯಾಗಲಿಲ್ಲ. ಬರಿಗೈಯಲ್ಲಿ ಬಂದವರಿಗೆಲ್ಲರಿಗೂ ಕೈ ತುಂಬಾ ಕೊಟ್ಟು ಕಳುಹಿಸುತ್ತಿದ್ದುದ್ದರಿಂದ ನಷ್ಟವುಂಟಾಗಿ ವ್ಯಾಪಾರ ಕೆಲವು ದಿವಸಗಳಲ್ಲಿಯೇ ಸ್ಥಗಿತಗೊಂಡಿತು. ನಂತರ ದಾಸರು ಬೆಂಗಳೂರಿಗೆ ಬಂದು ಅಡಿಕೆ ವ್ಯಾಪಾರದಲ್ಲಿ ತೊಡಗಿದರು. ದ್ರೋಹ ಚಿಂತನೆ ಎಳೆಯಷ್ಟೂ ಇಲ್ಲದಿದ್ದರಿಂದ ಈ ವ್ಯಾಪಾರವೂ ಊರ್ಜಿತವಾಗಲಿಲ್ಲ. ಅಡಿಕೆ ವ್ಯಾಪಾರವನ್ನು ನಿಲ್ಲಿಸಿ ಬೆಂಗಳೂರಿನ ಮಂಡಿ ಪೇಟೆಯಲ್ಲಿ ದಿನಸಿ ಅಂಗಡಿಯನ್ನು ತೆರೆದರು. ಇದರಿಂದ ಬಡಬಗ್ಗರಿಗೆ ಅನುಕೂಲವಾಯಿತೇ ಹೊರತು ದಾಸರಿಗೆ ಲಾಭವಾಗಲಿಲ್ಲ. ಕೊಂಡು ಹೋದವರು ತಮ್ಮ ಸಾಲಗಳನ್ನು ತೀರಿಸಲಿಲ್ಲ. ಕಾಂಚಾಣವನ್ನು ಎಂದೂ ಬೆನ್ನು ಹತ್ತಿ ಹೋಗದ ಪರಮಸಾತ್ವಿಕರಾದ ದಾಸರು ಕೊಟ್ಟೇ ತೀರಬೇಕೆಂದು ಕಠೋರ ವಾಕ್ಯಗಳಿಂದ ಯಾರನ್ನೂ ಆಗ್ರಹಪಡಿಸಿ ಕೇಳಲಿಲ್ಲ. ಇದರಿಂದ ಅಪಾರ ನಷ್ಟವುಂಟಾಗಿ ಹೂಡಿದ್ದ ಬಂಡವಾಳವೆಲ್ಲಾ ಕರಗಿ ಹೋಯಿತು ಕಡೆಗೆ ವಿಧಿಯಿಲ್ಲದೆ ಮಂಡಿಪೇಟೆಯ ಅಂಗಡಿಯನ್ನೂ ಮುಚ್ಚಿ ದಾಸರು ರಿಕ್ತಹಸ್ತರಾಗಿ ಸ್ವಗ್ರಾಮಕ್ಕೆ ಹಿಂದಿರುಗಿದರು. ಇಲ್ಲಿಗೆ ಅವರ ಲೌಕಿಕ ದಂಧೆಯ ವಾಂಛೆಗೆ ತೆರೆಬಿದ್ದಂತಾಯ್ತು.

## ದಾಸಕೂಟ ಸಭಾ ಸ್ಥಾಪನೆ

ಬೆಂಗಳೂರಿನಿಂದ ರಿಕ್ತಹಸ್ತರಾಗಿ ನರಸೀಪುರಕ್ಕೆ ಮರಳಿ ಬಂದ ನಂತರ ತಂದೆ ಮುದ್ದುಮೋಹನ ದಾಸರು ತಾವು ಇನ್ನು ಮುಂದೆ ಯಾವ ತರಹವಾದ ವ್ಯಾಪಾರಕ್ಕೂ ಕೈ ಹಾಕಬಾರದೆಂದು ನಿರ್ಧರಿಸಿದರು. ದಾಸರಾಯರ ಅವತಾರದ ಉದ್ದೇಶವೇ ಬೇರೆ ಆಗಿರುವಾಗ ಪರಮಾತ್ಮ ಅವರನ್ನು ಸಾಮಾನ್ಯ ಜನರಂತೆ ಲೌಕಿಕ ದಂಧೆಗಳಲ್ಲಿ ನಿರತರಾಗಲು ಬಿಡುವನೇ? ಆದರೂ ವ್ಯಾಪಾರ ಸಂಬಂಧದಿಂದಾದ ಎಲ್ಲಾ ತರಹದ ಕಷ್ಟನಷ್ಟಗಳ ಅನುಭವ ಅವರಿಗೆ ತಮ್ಮ ಮುಂದಿನ ಜೀವನದ ದಿಕ್ಕನ್ನು ಸ್ಪಷ್ಟಗೊಳಿಸಿಕೊಳ್ಳಲು ಹೊಸ ದೃಷ್ಟಿಕೋನವನ್ನು

ತಂದು ಕೊಟ್ಟಿತಲ್ಲದೆ ಮನುಷ್ಯ ಸಹಜವಾಗಿ ಹಣದ ಮೇಲೆ ಇರಬಹುದಾದ ಮೋಹವನ್ನು ನೀಗಿಕೊಳ್ಳಲೂ ನೆರವಾಯಿತು. ಸಮಾಧಾನಕರವಾದ ಸಂಗತಿಯೆಂದರೆ ಇಷ್ಟೆಲ್ಲಾ ಜಂಜಾಟಗಳ ನಡುವೆಯೂ ದಾಸರು ತಮ್ಮ ಇಬ್ಬರು ಹೆಣ್ಣು ಮಕ್ಕಳಾದ ಗುಂಡಮ್ಮ ಮತ್ತು ಸುಬ್ಬಮ್ಮ ಅವರುಗಳ ವಿವಾಹ ಮಹೋತ್ಸವಗಳನ್ನು ನೆರವೇರಿಸಿದರು. ಅದರಲ್ಲೂ ಹಿರಿಯ ಮಗಳಾದ ಗುಂಡಮ್ಮನಿಗೆ ಸೂಕ್ತವಾದ ವರವನ್ನು ಅವರ ಗುರುಗಳಾದ ಶ್ರೀಮುದ್ದು ಮೋಹನದಾಸರೇ ಸ್ವಪ್ನದಲ್ಲಿ ಸೂಚಿಸಿದರಂತೆ. ಇದರಿಂದ ತಮ್ಮ ಸ್ವರೂಪೋದ್ಧಾರಕ ಗುರುಗಳಲ್ಲಿ ದಾಸರು ಎಂತಹ ಸಮರ್ಪಣಾ ಭಾವದಿಂದ ಕೂಡಿದ ಅಂತರಂಗ ಭಕ್ತಿಯನ್ನು ಹೊಂದಿದ್ದರೆಂಬುದು ವೇದ್ಯವಾಗುತ್ತದೆ.

ತಮ್ಮ ಗುರುಗಳು ತೋರಿದ ಹೆದ್ದಾರಿಯಲಿ ನಡೆಯಲು ನಿಶ್ಚಯಿಸಿ ಎಷ್ಟೇ ಬಡತನವಿದ್ದರೂ ಸಂತಾಪಪಡದೆ ದೇವರು ಕೊಟ್ಟಷ್ಟರಲ್ಲಿಯೇ ಸಂತೃಪ್ತರಾಗಿ ಬದುಕುತ್ತಾ ದಾಸ–ವ್ಯಾಸ ಸಾಹಿತ್ಯದ ನಿರಂತರ ಅಧ್ಯಯನದಲ್ಲಿ ಶ್ರೀತಂದೆ ಮುದ್ದುಮೋಹನದಾಸರು ತೊಡಗಿದರು. "ಅಪ್ಪಾನ ನಾಮವನು ಒಪ್ಪತ್ತಾದರೂ ಭಜಿಸಿ, ಒಪ್ಪತ್ತುಂಬುವೆನಯ್ಯ ತಂದೆ ಮುದ್ದುಮೋಹನವಿಠಲ" ಎಂದು ಹೇಳುತ್ತಾ ಒಪ್ಪತ್ತು ಊಟ ಮಾಡಿದರೂ ಚಿಂತೆಯಿಲ್ಲ ಆದರೆ ತಮ್ಮಪ್ಪನೂ, ಜಗದಪ್ಪನೂ ಆದ ತಂದೆ ಮುದ್ದುಮೋಹನವಿಠಲನ ಗುಣಗಾನವನ್ನು ಮಾತ್ರ ಎಂದೂ ತಪ್ಪಿಸಬಾರದೆಂದೂ; ಯಾವ ಕಷ್ಟ ಬಂದರೂ, ಎಂತಹ ಕಠಿಣ ಪರಿಸ್ಥಿತಿ ಎದುರಾದರೂ ಧೃತಿಗೆಡದೆ, ಯಾರನ್ನೂ ಯಾಚಿಸದೆ, ಕೇವಲ ಮಧುಕರಿ ವೃತ್ತಿಯನ್ನನುಸರಿಸಿ ಹರಿದಾಸ ಧರ್ಮವನ್ನು ನಿಷ್ಠೆಯಿಂದ ಪರಿಪಾಲಿಸಬೇಕೆಂದೂ ದಾಸರು ದೃಢ ಸಂಕಲ್ಪ ಮಾಡಿದರು.

ಕುಸ್ತಿಯ ವಸ್ತಾದರಂತೆ ಕಟ್ಟುಮಸ್ತಾದ ಅಂಗಸೌಷ್ಟವವನ್ನು ಹೊಂದಿದ್ದ ತಂದೆ ಮುದ್ದುಮೋಹನದಾಸರು ಪ್ರತಿನಿತ್ಯ ಹರಿದಾಸ ಲಕ್ಷಣಭೂಷಿತರಾಗಿ ತಾಳ, ತಂಬೂರಿಗಳನ್ನು ಧರಿಸಿ ತಮ್ಮ ಮಧುರ ಕಂಠದಿಂದ ಹರಿನಾಮ ಸಂಕೀರ್ತನೆಯನ್ನು ಮಾಡುತ್ತಾ ನರಸೀಪುರ ಮತ್ತು ಸುತ್ತಮುತ್ತಲ ಗ್ರಾಮಗಳಿಗೆ ಯಾಯಾವರಕ್ಕೆ ಹೋಗುತ್ತಿದ್ದರು. ತುಳಸಿ ಮತ್ತು ಕಮಲಾಕ್ಷಿ ಮಾಲೆಗಳಿಂದ ಯುಕ್ತರಾಗಿ ವೈಷ್ಣವ ಚಿಹ್ನೆಗಳಿಂದ ಶೋಭಿಸುತ್ತಿದ್ದ ದಾಸರನ್ನು ಕಂಡರೆ ಎಂತಹ ಜಡ ಮನಸ್ಕರಲ್ಲಿಯೂ ಗೌರವ ಭಾವನೆ ಉತ್ಪನ್ನವಾಗುತ್ತಿತತ್ತು. ಒಮ್ಮೆ

ನೋಡಿದರೆ ಮತ್ತೊಮ್ಮೆ ನೋಡಬೇಕೆಂಬ ಅಪೇಕ್ಷೆಯುಂಟಾಗುತ್ತಿತ್ತು. ಜೊತೆಗೆ ದಾಸರು ಪ್ರಕಾಂಡ ಪಂಡಿತರೂ, ಪ್ರಚಂಡ ವಾಗ್ಮಿಗಳೂ ಆಗಿದ್ದುದ್ದರಿಂದ ಅವರ ವಿದ್ವತ್ಪೂರ್ಣವಾದ ಉಪನ್ಯಾಸ ಮತ್ತು ಉಪದೇಶಾಮೃತಗಳು ಅನೇಕ ಸುಜೀವಿಗಳ ಹೃದಯಗಳನ್ನು ಸೂರೆಗೊಂಡಿದ್ದವು. ಜನರ ನಾಡಿ ಮಿಡಿತವನ್ನು ಅರಿತು, ಅವರವರ ಮಟ್ಟಕ್ಕೆ ಮುಟ್ಟುವಂತೆ, ಸಂಸಾರದ ತಾಪದಿಂದ ಬೆಂದ ಮನಸ್ಸಿಗೆ ಮುಕುಂದನ ಶುಭನಾಮವೆಂಬ ದಿವ್ಯೌಷಧವನ್ನು ಸೂಚಿಸುತ್ತಾ, ಮನವರಳುವಂತೆ ಮಾತನಾಡುವ ಕಲೆ ದಾಸರಿಗೆ ಸಿದ್ಧಿಸಿತ್ತು. ಹಾಗಾಗಿ ಅವರ ನುಡಿಮುತ್ತುಗಳು ಪಂಡಿತ ಪಾಮರರಾದಿಯಾಗಿ ಎಲ್ಲಾ ವಿಧದ ಜನ ಸಮೂಹವನ್ನೂ ಆಕರ್ಷಿಸುವಂತೆ ಇರುತ್ತಿದ್ದವಲ್ಲದೆ ದಾಸರು ಪ್ರಮುಖವಾಗಿ ಪ್ರತಿಪಾದಿಸುತ್ತಿದ್ದ ಹರಿದಾಸ ಸಾಹಿತ್ಯದಲ್ಲಿ ಆದರಾಸಕ್ತಿಯನ್ನು ಮೂಡಿಸುವಂತಿರುತ್ತಿದ್ದವು.

"ಕರಿಗಿರಿ ಯಾತ್ರೆ ಮಾಡದವ ಭವ। ಕರಕರಿ ಪಡುವ ತಂದೆ ಮುದ್ದುಮೋಹನ ವಿಠಲ" ಎಂಬುದಾಗಿ ತಮ್ಮ ಉಗಾಭೋಗವೊಂದರಲ್ಲಿ ಅವರೇ ಸಾರಿರುವಂತೆ ದಾಸರು ಸನಿಹದಲ್ಲಿಯೇ ಇರುವ ಕರಿಗಿರಿ ಕ್ಷೇತ್ರಕ್ಕೆ ಅನೇಕ ಸಾರಿ ಯಾತ್ರೆ ಹೋಗುತ್ತಿದ್ದರು. ಪುರಾಣ ಪ್ರಸಿದ್ಧವಾದ ಪುಣ್ಯಕ್ಷೇತ್ರವೂ, ತಮ್ಮ ಅರಿವಿಗೆ ಕಾರಣವಾದ ಗುರುವನ್ನು ಕರುಣಿಸಿದ ಗುರುತರ ಸ್ಥಳವೂ ಆದ ಆ ಕ್ಷೇತ್ರ ಅವರಿಗೆ ತುಂಬಾ ಪ್ರಿಯವಾಗಿತ್ತು. ಅಲ್ಲಿ ನಡೆಯುವ ನರಸಿಂಹ ಜಯಂತಿ, ಶ್ರೀಲಕ್ಷ್ಮೀನರಸಿಂಹ ಸ್ವಾಮಿ ರಥೋತ್ಸವ ಮುಂತಾದ ಹಲವಾರು ವಿಶೇಷ ಸಂದರ್ಭಗಳಲ್ಲಿ ದಾಸರು ಅತೀವ ಉತ್ಸಾಹದಿಂದ ಭಾಗವಹಿಸುತ್ತಿದ್ದರು. ಕಾಲಿಗೆ ಗೆಜ್ಜೆ ಕಟ್ಟಿ, ತಾಳ ತಂಬೂರಿಗಳನ್ನು ಹಿಡಿದು, ನರ್ತನ ಮಾಡುತ್ತಾ ಸುಸ್ವರದಲ್ಲಿ ಹರಿಕೀರ್ತನೆಗಳನ್ನು ಹಾಡುತ್ತಿದ್ದರು. ಭಕ್ತ್ಯುದ್ರೇಕವಾಗುವಂತೆ ಹರಿದಾಸರ ವಚನಗಳನ್ನು ಅಲ್ಲಲ್ಲಿ ಉಲ್ಲೇಖಿಸುತ್ತಾ ವಿದ್ವತ್ಪೂರ್ಣ ಶೈಲಿಯಲ್ಲಿ ಪುರಾಣ-ಪ್ರವಚನಗಳನ್ನು ನೀಡುತ್ತಿದ್ದರು. ಕ್ಷೇತ್ರದರ್ಶನಕ್ಕಾಗಿ ಬಂದ ಭಕ್ತಾದಿಗಳನ್ನು ಒಗ್ಗೂಡಿಸಿ ಜ್ಞಾನಸತ್ರಗಳನ್ನು ನಡೆಸುತ್ತಿದ್ದರು. ಜ್ಞಾನ ಸತ್ರಗಳೊಂದಿಗೆ ನಿತ್ಯ ಯಾಯಾವರಗಳಲ್ಲಿ ಸಂಗ್ರಹವಾದ ಎಲ್ಲಾ ಧನ-ಧಾನ್ಯಗಳನ್ನು ವಿನಿಯೋಗಿಸಿ ಯಾತ್ರಿಕರ ಸಂತೃಪ್ತಿಗಾಗಿ ಅನ್ನಸತ್ರವನ್ನೂ ಸಹ ಜರುಗಿಸುತ್ತಿದ್ದರು.

ಹೃನ್ಮನಗಳನ್ನು ತಣಿಸುವಂತೆ ಹರಿನಾಮ ಸಂಕೀರ್ತನೆಯನ್ನೂ,

ಹರಿದಾಸರ ತತ್ವಬೋಧನೆಯನ್ನೂ ಮಾಡುತ್ತಾ ಅನೇಕ ಭಾವುಕರನ್ನು ಆಕರ್ಷಿಸುತ್ತಿದ್ದ ತಂದೆ ಮುದ್ದುಮೋಹನದಾಸರ ಜನಪ್ರಿಯತೆ ದಿನೇ ದಿನೇ ಹೆಚ್ಚತೊಡಗಿತು. ದಾಸರ ಉಪದೇಶಾಮೃತವನ್ನು ಆಸ್ವಾದಿಸಿ ಹಲವಾರು ಭಕ್ತಾದಿಗಳು ಅವರ ಅಭಿಮಾನಿಗಳಾದರು. ಹಾಗಾಗಿ ಪ್ರತಿವರ್ಷ ಕರಿಗಿರಿ ಕ್ಷೇತ್ರಕ್ಕೆ ಬರುವವರ ಸಂಖ್ಯೆ, ದಾಸರು ನಡೆಸುವ ಜ್ಞಾನ ಸತ್ರಗಳಲ್ಲಿ ಭಾಗವಹಿಸುವವರ ಸಂಖ್ಯೆ ಗಣನೀಯವಾಗಿ ಅಧಿಕವಾಗತೊಡಗಿತು.

## ಪ್ರಥಮ ಶಿಷ್ಯಪ್ರಾಪ್ತಿ

ಹೀಗಿರುವಾಗ ಒಮ್ಮೆ ಕರಿಗಿರಿಯ ಶ್ರೀಲಕ್ಷ್ಮೀನರಸಿಂಹ ಸ್ವಾಮಿ ರಥೋತ್ಸವದ ಸಂದರ್ಭದಲ್ಲಿ ದಾಸರಿಗೆ ಪ್ರಥಮ ಶಿಷ್ಯರತ್ನವೊಂದು ಲಭ್ಯವಾಯಿತು. ಕೋಲಾರ ಜಿಲ್ಲಾ ಬಾಗೇಪಲ್ಲಿಯಲ್ಲಿ ಶೇಷಣ್ಣ ಎಂಬುವವರು ಹರಿಕಥಾ ಪ್ರವಚನದಲ್ಲಿ ನಿಷ್ಣಾತರಾಗಿದ್ದು ಬಾಗೇಪಲ್ಲಿ ಶೇಷದಾಸರೆಂದು ಪ್ರಸಿದ್ಧರಾಗಿದ್ದರು. ಷಾಷ್ಠಿಕ ಸದ್ವಂಶಕ್ಕೆ ಸೇರಿದ ದಾಸರು ವಿಶ್ವಾಮಿತ್ರ ಗೋತ್ರೋತ್ಪನ್ನರು. ಸದಾಚಾರ ಸಂಪನ್ನರು. ಆಶು ಕವಿಗಳೂ ಆಗಿದ್ದ ಅವರು "ಶೇಷ ವಿಠಲ" ಎಂಬ ಅಂಕಿತವನ್ನು ತಾವೇ ಇಟ್ಟುಕೊಂಡು ಅನೇಕ ಕೃತಿಗಳನ್ನು ರಚಿಸಿದ್ದರು. ಆದರೂ ದಾಸರಿಗೆ ದೊಡ್ಡವರ ಪೀಳಿಗೆಯಲ್ಲಿ ಬಂದ ನೀತ ಗುರುಗಳಿಂದ ಉಪದೇಶವಾಗಲಿಲ್ಲವಲ್ಲ ಎಂಬ ಕೊರಗು ತೀವ್ರವಾಗಿತ್ತು. ತಮ್ಮ ಮನದ ಹಂಬಲವನ್ನು ಭಗವಂತನಲ್ಲಿ ನಿವೇದಿಸಿಕೊಂಡು ನೀತ ಗುರುಗಳ ಪ್ರಾಪ್ತಿಗಾಗಿ ದಾಸರು ಅನವರತ ಮೊರೆಯಿಡುತ್ತಿದ್ದರು.

ಶೇಷದಾಸರ ಮೊರೆ ಶೇಷಶಾಯಿಯಾದ ಶ್ರೀಶನಿಗೆ ಕೇಳಿಸಿತೆಂದೇ ತೋರುತ್ತದೆ. ಪ್ರತಿವರ್ಷ ತಮ್ಮ ಮನೆದೇವರಾದ ಕರಿಗಿರಿಯ ಶ್ರೀಲಕ್ಷ್ಮೀನರಸಿಂಹ ಸ್ವಾಮಿಯ ರಥೋತ್ಸವದಲ್ಲಿ ಭಾಗವಹಿಸುವ ಸಂಪ್ರದಾಯವನ್ನಿಟ್ಟುಕೊಂಡಿದ್ದ ದಾಸರಿಗೆ ಒಮ್ಮೆ ಶ್ರೀ ತಂದೆ ಮುದ್ದುಮೋಹನದಾಸರ ದರ್ಶನ ಭಾಗ್ಯವೊದಗಿತಲ್ಲದೆ ಅವರ ವಿಚಾರಧಾರೆಯನ್ನು ಸವಿಯುವ ಅವಕಾಶವೂ ಪ್ರಾಪ್ತವಾಯಿತು. ಹರಿದಾಸರ ತತ್ವಗಳ ತಿರುಳನ್ನು ಶಾಸ್ತ್ರ ಪ್ರಮೇಯಗಳೊಂದಿಗೆ ಸಮನ್ವಯಿಸಿ ಎಂತಹ ಪಂಡಿತರೂ ತಲೆದೂಗುವಂತೆ, ಎಂತಹ ಪಾಮರರಿಗೂ ಅರ್ಥವಾಗುವಂತೆ ಉಪನ್ಯಾಸ ಮಾಡುತ್ತಿದ್ದ ದಾಸರ

ಅನುಭವೋಕ್ತಿಗಳು ಶೇಷದಾಸರ ಅರಿವಿನ ಕಣ್ಣನ್ನು ತೆರೆಸಿದವು. ಶ್ರೀಹರಿಯ ಕೈಂಕರ್ಯಕ್ಕಾಗಿ ತಮ್ಮ ಬದುಕನ್ನೇ ಮೀಸಲಿಟ್ಟು ಆವಧೂತರಂತೆ ಸಂಚರಿಸುತ್ತಿದ್ದ ದಾಸರ ಧೀರೋದ್ದಾತ್ತ ವ್ಯಕ್ತಿತ್ವ, ಅಸೀಮ ವೈರಾಗ್ಯ ಅವರ ಮೇಲೆ ಗಾಢವಾದ ಪ್ರಭಾವವನ್ನೇ ಬೀರಿದವು. ಅದರಲ್ಲೂ ದಾಸರು ಶ್ರೀವಿಜಯದಾಸರ ಪಾವನ ಪರಂಪರೆಯಲ್ಲಿ ಬಂದ ಜ್ಞಾನಿವರೇಣ್ಯರಾದ ದೊಡ್ಡಬಳ್ಳಾಪುರದ ಶ್ರೀಮುದ್ದುಮೋಹನದಾಸರ ನೇರ ಶಿಷ್ಯರೆಂಬುದನ್ನು ತಿಳಿದ ಮೇಲಂತೂ ಶೇಷದಾಸರಿಗೆ 'ಇಂಥ ಮಹಾನುಭಾವರಿಂದ ಅಂಕಿತೋಪದೇಶ ಪಡೆದು ಹರಿದಾಸನಾಗಬೇಕು' ಎಂಬ ಅಪೇಕ್ಷೆ ಪ್ರಬಲವಾಯಿತು. ಶೇಷದಾಸರು ತಂದೆ ಮುದ್ದುಮೋಹನದಾಸರನ್ನು ಏಕಾಂತದಲ್ಲಿ ಭೇಟಿಯಾಗಿ ತಮ್ಮ ಅಂತರಂಗದ ಬಯಕೆಯನ್ನು ನಿವೇದಿಸಿಕೊಂಡರು. ಶೇಷದಾಸರ ಯೋಗ್ಯತೆಯನ್ನು ಚೆನ್ನಾಗಿ ತಿಳಿದಿದ್ದ ಜ್ಞಾನಿಗಳಾದ ಶ್ರೀತಂದೆ ಮುದ್ದುಮೋಹನದಾಸರು ದಾಸದೀಕ್ಷೆಯ ಪ್ರಥಮ ಬೀಜಾಂಕುರಕ್ಕೆ ಸೂಕ್ತವ್ಯಕ್ತಿಯನ್ನು ಶ್ರೀಹರಿಯೇ ಕಳುಹಿಸಿಕೊಟ್ಟನೆಂದು ಸಂತೋಷಪಟ್ಟರು. ಅತ್ಯಂತ ವಿನೀತರಾಗಿ ಪಾದಕ್ರಾಂತರಾದ ಶೇಷದಾಸರ ಮೈದಡವಿ ಎಬ್ಬಿಸಿ ಅಭಯ ನೀಡಿದರು. ಗುರುವಾಜ್ಞೆಯಂತೆ ಹರಿದಾಸ ಪರಂಪರೆಯನ್ನು ವ್ಯಾಪಕವಾಗಿ ಬೆಳೆಸುವ ತಮ್ಮ ಮಹತ್ಕಾರ್ಯಕ್ಕೆ ಅವರನ್ನು ಅನುಗ್ರಹಿಸುವ ಮೂಲಕ ಶ್ರೀಕಾರ ಹಾಕಿದರು. ತಾವು ತಪಸ್ಸಿದ್ಧಿಯನ್ನು ಪಡೆದ ರಾಮದೇವರ ಬೆಟ್ಟದ ರಾಮಗುಹೆಗೆ ಶೇಷದಾಸರನ್ನು ಕರೆದುಕೊಂಡು ಹೋಗಿ ಅವರ ಮಸ್ತಕದ ಮೇಲೆ ತಮ್ಮ ದಿವ್ಯ ಹಸ್ತವಿಟ್ಟು ಬಿಂಬಮೂರ್ತಿಯನ್ನು ಪ್ರಾರ್ಥಿಸಿ "ಪ್ರಾಣನಾಥವಿಠಲ" ಎಂಬು ಅಂಕಿತೋಪದೇಶ ಮಾಡಿದರು.

ಕ್ರಿ.ಶ. 1902ರ ಪ್ಲವನಾಮ ಸಂವತ್ಸರದ ಮಾಘ ಶುದ್ಧ ದಶಮಿ ಸೋಮವಾರ ಅಭಿಜಿನ್ಮುಹೂರ್ತದಲ್ಲಿ ನಡೆದ ಈ ಪ್ರಥಮ ಅಂಕಿತಪ್ರದಾನದ ಸುಸಂದರ್ಭದಲ್ಲಿ ಅಂತರಿಕ್ಷದಿಂದ ದೇವ ದುಂದುಭಿಗಳು ಮೊಳಗಿ ಮಂಗಳಕರವಾದ ನಾದ ಕೇಳಿ ಬಂದಿತೆಂದೂ, ಆ ಅನುಭವ ತಮ್ಮ ಗುರು ಗಳಾದ ಶ್ರೀತಂದೆ ಮುದ್ದುಮೋಹನದಾಸರಿಂದ ತಮಗೆ ಮುಖತಃ ವರ್ಣಿಸಲ್ಪಟ್ಟಿದೆ ಎಂದೂ ಶ್ರೀ ರಮಾಕಾಂತದಾಸರು ಮತ್ತು ಶ್ರೀಗುರುಗೋವಿಂದ ದಾಸರು ತಾವು ಪ್ರಕಾಶಿಸಿರುವ 'ಪರಮಪ್ರಿಯ ಸುಬ್ಬರಾಯದಾಸರು" ಎಂಬ ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ.

ಬಾಗೇಪಲ್ಲಿ ಶೇಷದಾಸರು ಅಂದಿನಿಂದ ಶ್ರೀಪ್ರಾಣನಾಥ ವಿಠಲದಾಸರಾದರು. ಮುಂದೆ ಅವರು ಗುರುವನುಗ್ರಹ ಬಲದಿಂದ ಸತ್ಸಾಧನೆ ಮಾಡಿಕೊಂಡು ಶ್ರೀಶನೊಲುಮೆಯನ್ನು ಸಂಪಾದಿಸಿದರಲ್ಲದೆ ಅನೇಕ ಸುಜೀವಿಗಳಿಗೆ ಹರಿದಾಸ ದೀಕ್ಷೆನೀಡಿ ಮಾರ್ಗದರ್ಶಕರರಾದರು. ಭಕ್ತಿರಸಭರಿತವಾದ ನೂರಾರು ಪದ-ಪದ್ಯಗಳನ್ನು ರಚಿಸಿ ಗುರುಬಿಂಬನಿಗೆ ಸಮರ್ಪಣೆ ಮಾಡಿದರು. ದಾಸರ ಕೆಲವು ಕೃತಿಗಳು "ಶೇಷವಿಠಲ" ಎಂಬ ಅಂಕಿತದಲ್ಲಿಯೂ ಮತ್ತೆ ಕೆಲವು ಕೃತಿಗಳು "ಪ್ರಾಣನಾಥವಿಠಲ" ಎಂಬ ಮುದ್ರಿಕೆಯಲ್ಲಿಯೂ ರಚಿತವಾಗಿರುವುದು ಕಂಡುಬರುತ್ತವೆ. ಅಂಕಿತಪೂರ್ವದಲ್ಲಿ ರಚಿಸಿದ ಶೇಷವಿಠಲಾಂಕಿತ ಕೃತಿಗಳನ್ನು ದಾಸರು ಹಾಗೇ ಉಳಿಸಿಕೊಂಡಿರಬೇಕು. ದಾಸರ ಅನೇಕ ಶಿಷ್ಯರಲ್ಲಿ ಶ್ರೀನಿಧಿ ಮೋಹನವಿಠಲಾಂಕಿತರಾದ ನಂದಗುಡಿ ಶ್ರೀಶ್ಯಾಮದಾಸರು ಪ್ರಸಿದ್ಧರು. ಮನಮುಟ್ಟುವಂತೆ ಸ್ವಾರಸ್ಯಕರವಾಗಿ ಹರಿಕಥೆ ಮಾಡುತ್ತಿದ್ದ ಶ್ರೀಪ್ರಾಣನಾಥ ವಿಠಲದಾಸರು ತಮ್ಮ ಎಪ್ಪತ್ತನೆಯ ವಯಸ್ಸಿನಲ್ಲಿ ಹರಿಸ್ಮರಣೆ ಪೂರ್ವಕ ದೇಹತ್ಯಾಗ ಮಾಡಿದರು.

ಬಾಗೇಪಲ್ಲಿಯ ಶೇಷದಾಸರು "ಶ್ರೀಪ್ರಾಣನಾಥ ವಿಠಲ" ಎಂದು ಅಂಕಿತ ದೀಕ್ಷೆ ಪಡೆದ ನಂತರ ಅವರ ಭಾವಮೈದುನರಾದ ವೆಂಕಟರಮಣ ಎಂಬುವವರು ತಂದೆ ಮುದ್ದುಮೋಹನದಾಸರಲ್ಲಿಗೆ ಬಂದು "ಸರ್ವೇಶ ವಿಠಲ" ಎಂಬ ಅಂಕಿತವನ್ನು ಸ್ವೀಕರಿಸಿ ದಾಸರ ಶಿಷ್ಯರಾದರು. ಅವರಾದ ಮೇಲೆ ಇರ್ಕಸಂದ್ರದ ಶ್ರೀವೇದವ್ಯಾಸಾಚಾರ್ಯರು ದಾಸರಿಂದ ಅನುಗ್ರಹೀತರಾಗಿ "ಸಿರಿ ಮೋಹನ ವಿಠಲ" ಎಂಬ ಅಂಕಿತವನ್ನು ಪಡೆದುಕೊಂಡರು. ಹೀಗೆ ಪ್ರಾರಂಭವಾಯಿತು ದಾಸರ ಶಿಷ್ಯ ಸಂಗ್ರಹಕಾರ್ಯ. ಸ್ವಭಾವತಃ ಕೃಪಾಳುಗಳಾಗಿದ್ದ ದಾಸರು ತಮ್ಮ ಬಳಿಗೆ ಬರುವವರನ್ನು ಪ್ರೀತಿ ವಿಶ್ವಾಸಗಳಿಂದ ಕಂಡು ಅವರ ಮಾನಸಿಕ ಕ್ಲೇಶಗಳನ್ನು ನಿವಾರಿಸುತ್ತಿದ್ದರು. ಹಾಗಾಗಿ ದಾಸರನ್ನು ಸುಜೀವಿಗಳು ಬೆಲ್ಲಕ್ಕೆ ಇರುವೆ ಮುತ್ತವಂತೆ ಸುತ್ತುವರೆದಿರುತ್ತಿದ್ದರು. ದಾಸರ ಅಂತಸ್ಸತ್ವಕ್ಕೆ ಬೆರಗಾಗಿ ಅವರ ಉಪದೇಶಾಮೃತದಿಂದ ತಮ್ಮ ಬದುಕಿನಲ್ಲಿ ಬೆಳಕನ್ನು ಕಂಡುಕೊಳ್ಳುತ್ತಿದ್ದರು. ದಾಸರಿಂದ ಉಪದಿಷ್ಟರಾಗಿ ಅವರ ಶಿಷ್ಯವರ್ಗದಲ್ಲಿ ಸೇರ್ಪಡೆಯಾಗುತ್ತಿದ್ದರು.

ಶಿಷ್ಯವೃಂದ ಹೆಚ್ಚುತ್ತಿದಂತೆ ಹರಿದಾಸರೆಲ್ಲರೂ ಒಟ್ಟಾಗಿ ಒಂದು ನಿರ್ದಿಷ್ಟ ಸ್ಥಳದಲ್ಲಿ ಸೇರಿ ಅಧ್ಯಾತ್ಮಿಕ ತತ್ವಗಳನ್ನು ಸಮಾಲೋಚಿಸಲು, ಭಜನೆ ಆರಾಧನೆ ಮುಂತಾದ ಕಾರ್ಯಕ್ರಮಗಳನ್ನು ನಡೆಸಲು ಶಾಶ್ವತ ಕೇಂದ್ರವೊಂದನ್ನು ತೆರೆಯಬೇಕೆಂದು ತಂದೆ ಮುದ್ದುಮೋಹನದಾಸರು ವಿಚಾರ ಮಾಡ ತೊಡಗಿದರು. ಶ್ರೀಯೋಗಾ ಮತ್ತು ಭೋಗಾ ನರಸಿಂಹ ಸ್ವಾಮಿ ದಿವ್ಯಸಾನಿಧ್ಯ ದಿಂದಾಗಿ ಯುಗ ಯುಗಗಳಿಂದಲೂ ಪ್ರಸಿದ್ಧವಾದ ಕರಿಗಿರಿ ಅಥವಾ ದೇವರಾಯನದುರ್ಗ ತಮ್ಮ ಮುಂದಿನ ಕಾರ್ಯಸಾಧನೆಗೆ ತಕ್ಕ ಕ್ಷೇತ್ರವಾಗುವುದಲ್ಲದೆ ತಾವು ಈವರೆಗೆ ಸ್ವಾಮಿಯ ಕೃಪೆಯಿಂದ ನಡೆಸಿಕೊಂಡು ಬಂದ ಜ್ಞಾನಸತ್ರ–ಅನ್ನಸತ್ರಗಳ ನಿರ್ವಹಣೆಗೂ ಇದು ಸಹಕಾರಿಯಾಗುವು ದೆಂದು ದಾಸರು ನಿರ್ಣಯಿಸಿದರು. ಈ ವಿಷಯವನ್ನು ಅವರು ತಮ್ಮ ಶಿಷ್ಯವೃಂದ ಹಾಗೂ ದಾಸ ಸಾಹಿತ್ಯಾಭಿಮಾನಿಗಳೊಂದಿಗೆ ಪ್ರಸ್ತಾಪಿಸಿದಾಗ ಎಲ್ಲರೂ ಮುಕ್ತಕಂಠದಿಂದ ಸಮ್ಮತಿಯನ್ನು ಸೂಚಿಸಿ ಉತ್ಸಾಹದಿಂದ ಸಹಕರಿಸಲು ಮುಂದೆ ಬಂದರು. ಇದಕ್ಕೆ ಪೂರಕವಾಗಿ ದಾಸರಲ್ಲಿ ಅಪರಿಮಿತ ಭಕ್ತಿಯನ್ನು ಹೊಂದಿದ್ದ ದೇವರಾಯದುರ್ಗದ ಶ್ಯಾನುಭೋಗ್ ಸೀತಾರಾಮಯ್ಯನವರ ಮಗನಾಧ ಮಧ್ವ ನರಸಿಂಹಪ್ಪ ಎಂಬುವವರು ಸ್ವಯಂ ಪ್ರೇರಣೆಯಿಂದ ಶ್ರೀಲಕ್ಷ್ಮೀನರಸಿಂಹಸ್ವಾಮಿ ದೇವಸ್ಥಾನದ ಎಡಭಾಗದಲ್ಲಿದ್ದ ತಮ್ಮ ಸ್ವಂತ ಭೂಮಿಯನ್ನು ಧಾರ್ಮಿಕ ಕಾರ್ಯಗಳನ್ನು ನಡೆಸಲು ದಾಸರಿಗೆ ದಾನವಾಗಿ ಕೊಟ್ಟರು. ತಮ್ಮ ಸಂಕಲ್ಪ ಪರಮಾತ್ಮನ ಚಿತ್ತಕ್ಕೆ ಬಂದಿರುವುದೆಂದು ತಿಳಿದು ದಾಸರಿಗೆ ತುಂಬಾ ಸಂತೋಷವಾಯಿತು.

ತಂದೆ ಮುದ್ದುಮೋಹನದಾಸರು ತಮ್ಮ ಶಿಷ್ಯವೃಂದ ಮತ್ತು ಅಭಿಮಾನಿ ಗಳೊಡಗೂಡಿ ದಾನವಾಗಿ ಬಂದ ಸ್ಥಳದಲ್ಲಿ ಭೂಪೂಜೆ ನೆರವೇರಿಸಿ ವಿಕಾರಿ ನಾಮ ಸಂವತ್ಸರದ ಶುಭ ಮುಹೂರ್ತದಲ್ಲಿ ಶುಭಕರನೂ, ಶುಭಾಂಗನೂ ಆದ ಶ್ರೀಲಕ್ಷ್ಮೀನರಸಿಂಹನ ಚರಣಾರವಿಂದಗಳನ್ನು ಶುದ್ಧಾಂತರಕರಣದಿಂದ ಸ್ಮರಿಸುತ್ತಾ "ಶ್ರೀಮತ್ಸಮೀರ ಸಮಯಾನು ಪ್ರವೃತ್ತಿ ಸಭಾ ಅಥವಾ ದ್ವೈತಮತ ಸಿದ್ಧಾಂತೋನ್ನಾಹಿನಿ ಸಭಾ" ಎಂಬ ಶುಭನಾಮಧೇಯದಿಂದ ಕರಿಗಿರಿ ಕ್ಷೇತ್ರವೆಂದು ಪ್ರಸಿದ್ಧವಾದ ದೇವರಾಯನದುರ್ಗದಲ್ಲಿ ಹರಿದಾಸ

ಕೇಂದ್ರವೊಂದನ್ನು ಸ್ಥಾಪನೆ ಮಾಡಿದರು. ಇದರಿಂದ ಹರಿದಾಸರಿಗೆ ಹರಿಕೈಂಕರ್ಯವನ್ನು ವ್ಯವಸ್ಥಿತವಾಗಿ ನಡೆಸಲು ಒಂದು ನೆಲೆ ಸಿಕ್ಕಿದಂತಾಯಿತು. ಮುಂದೆ ಈ ಸಭಾ "ದೇವರಾಯನದುರ್ಗದ ದಾಸಕೂಟ ಸಭಾ" ಎಂಬ ಹೆಸರಿನಿಂದಲೇ ಹೆಚ್ಚು ಪ್ರಸಿದ್ಧಿಗೆ ಬಂದಿತು. ಈ ಸ್ಥಳದಲ್ಲಿ ಅನೇಕ ಜ್ಞಾನಸತ್ರಗಳು ಅದರಲ್ಲೂ ವಿಶೇಷವಾಗಿ ಅನ್ನಸತ್ರವೂ ಜರಗುತ್ತಿದ್ದುದ್ದರಿಂದ ಜನಗಳ ಬಾಯಲ್ಲಿ ಇದು ದಾಸರ ಕೊಪ್ಪಲಾಯಿತು. ದಾಸರು ಇಲ್ಲಿ ಒಂದು ಕಟ್ಟಡವನ್ನು ಕಟ್ಟಿಸಿ, ಪ್ರತಿವರ್ಷವೂ ನರಸಿಂಹ ಜಯಂತಿ, ಶ್ರೀಲಕ್ಷ್ಮೀನರಸಿಂಹಸ್ವಾಮಿಯ ರಥೋತ್ಸವ ಮುಂತಾದ ವಿಶೇಷ ಸಂದರ್ಭಗಳಲ್ಲಿ ಮುಂಚಿತವಾಗಿ ಬಂದು ದಾಸಕೂಟ ಸಭಾದಲ್ಲಿ ಬಿಡಾರ ಮಾಡುತ್ತಿದ್ದರು. ತಾವೇ ಕಾರ್ಯದರ್ಶಿಗಳಾಗಿ ನಿಂತು ಶ್ರೀಕ್ಷೇತ್ರಕ್ಕೆ ಬರುವ ಭಕ್ತಾದಿಗಳನ್ನೂ, ದಾಸಸಾಹಿತ್ಯಾಭಿಮಾನಿಗಳನ್ನೂ ನಗುಮುಖದಿಂದ ಬರಮಾಡಿಕೊಂಡು ಉತ್ಸವಾದಿ ಸಕಲ ಕಾರ್ಯಕ್ರಮಗಳನ್ನು ಸಂಭ್ರಮದಿಂದ ನಡೆಸುತ್ತಿದ್ದರು. ಅನೇಕ ಯತಿಗಳ, ದಾಸರ ಆರಾಧನೋತ್ಸವಗಳನ್ನು ಹಮ್ಮಿಕೊಳ್ಳುತ್ತಿದ್ದರಲ್ಲದೆ ಉತ್ಸವದ ಸಂದರ್ಭಗಳಲ್ಲಿ ಶ್ರೀಹರಿಕಥಾಮೃತಸಾರ, ದೇವರನಾಮ ಸುಳಾದಿ ಮುಂತಾದವುಗಳ ಕಂಠಪಾಠ ಸ್ಪರ್ಧೆ ಮತ್ತು ಅವುಗಳಲ್ಲಿ ಅಭಿವ್ಯಕ್ತವಾಗಿರುವ ವಿಶೇಷ ಪ್ರಮೇಯಗಳನ್ನು ಶಾಸ್ತ್ರೋಕ್ತವಾಗಿ ಸಾದರ ಪಡಿಸುವ ಉಪನ್ಯಾಸ ಪರೀಕ್ಷೆಗಳನ್ನು ನಡೆಸಿ ವಿಜೇತರಾದವರಿಗೆ ಅನುಗ್ರಹಪೂರ್ವಕ ಬಹುಮಾನಗಳನ್ನೂ, ಸಂಭಾವನೆ ಗಳನ್ನೂ ಧಾರಾಳವಾಗಿ ನೀಡುತ್ತಿದ್ದರು.

ಮದುವೆಯಾದ ಹೆಣ್ಣು ಮಗಳು ಶುಭದಿನಗಳಂದು ಸಂಭ್ರಮದಿಂದ ತನ್ನ ತವರು ಮನೆಗೆ ಬರುವಂತೆ ದಾಸಕೂಟಸ್ಥರೆಲ್ಲರೂ ಕರಿಗಿರಿ ಕ್ಷೇತ್ರದಲ್ಲಿ ದಾಸರು ಸ್ಥಾಪಿಸಿದ "ದಾಸಕೂಟ ಸಭಾಮಂದಿರ"ಕ್ಕೆ ಉತ್ಸಾಹದಿಂದ ಬರಲು ಪ್ರಾರಂಭಿಸಿದರು. ದಾಸರು ನಡೆಸುವ ಭಜನೆ, ಆರಾಧನೆ, ಬ್ರಾಹ್ಮಣ ಸಮಾರಾಧನೆ, ಏಕಾದಶಿಯ ಜಾಗರಣೆ, ವಿದ್ವದ್ಗೋಷ್ಠಿ ಮುಂತಾದ ಪುಣ್ಯಕಾರ್ಯಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಅವರಿಗೆ ಸರ್ವವಿಧ ದಿಂದಲೂ ನೆರವಾಗತೊಡಗಿದರು. ಹೀಗೆ ದಾಸಕೂಟ ಸಭಾಮಂದಿರದ ಸ್ಥಾಪನೆ ದಾಸಶಕೆಯ ಶುಭೋಧ್ಯಾಯದ ಪ್ರಾರಂಭಕ್ಕೆ ನಾಂದಿಯಾಯಿತು. ಕಾಲಾಂತರದಲ್ಲಿ ದಾಸರು ಕದರುಮಂಡಲಿಗಿಯಿಂದ ಮುಖ್ಯಪ್ರಾಣದೇವರ

ವಿಗ್ರಹವನ್ನು ತಂದು ಈ ಸಭಾಮಂದಿರದಲ್ಲಿ ಪ್ರತಿಷ್ಠಾಪಿಸಿದ ಮೇಲಂತೂ ಇದು ಸುಂದರೇಶನ ದಿವ್ಯ ಸನ್ನಿಧಿಯಾಗಿ ಹೊಸರೂಪವನ್ನು ಪಡೆದುಕೊಂಡಿತು.

## ದೇಶ ಪರ್ಯಟನೆ – ಮಹಿಮಾ ಪ್ರಕಟನೆ

ದೇವರಾಯನದುರ್ಗದಲ್ಲಿ ದಾಸಕೂಟ ಸಭಾಮಂದಿರವನ್ನು ಸ್ಥಾಪಿಸಿದ ನಂತರ ತಂದೆ ಮುದ್ದುಮೋಹನದಾಸರು ತಮ್ಮ ಶಿಷ್ಯರ ಮತ್ತು ಆತ್ಮೀಯರ ಆಹ್ವಾನದಂತೆ ಹಲವಾರು ಊರುಗಳಿಗೆ ಪ್ರವಾಸ ಕೈಗೊಂಡರು. ಹರಿವಾಯು ಗುರುಗಳ ಭಕ್ತಿಯನ್ನು ಪಸರಿಸಿ ದಾಸ ಪರಂಪರೆಯನ್ನು ವ್ಯಾಪಕವಾಗಿ ಬೆಳೆಸಲು ಸುಭದ್ರ ಅಡಿಪಾಯವನ್ನು ಹಾಕುವುದೇ ಅವರ ಪ್ರವಾಸದ ಮುಖ್ಯ ಉದ್ದೇಶವಾಗಿತ್ತು.

ಪ್ರವಾಸ ಕಾಲದಲ್ಲಿ ದಾಸರ ಆಪ್ತಶಿಷ್ಯರಾದ ಇರ್ಕಸಂದ್ರದ ಶ್ರೀವೇದವ್ಯಾಸಾಚಾರ್ಯರು ದಿಗ್ವಿಜಯ ಪ್ರಾಣದೇವರ ಪ್ರತೀಕವನ್ನು ಎದೆಗೊಪ್ಪುವಂತೆ ಕೊರಳಿಗೆ ತೂಗು ಹಾಕಿಕೊಂಡು ಎಲ್ಲರಿಗೂ ಮುಂದೆ ಹೊರಡುತ್ತಿದ್ದರು. ಅವರ ಹಿಂದೆ ದಾಸರು ಮತ್ತು ಅವರ ಪರಿವಾರ ತಾಳ, ತಂಬೂರಿಗಳೊಂದಿಗೆ ಹರಿ ಕೀರ್ತನೆಯನ್ನು ಸುಸ್ವರದಲ್ಲಿ ಹಾಡುತ್ತಾ ಸಾಗುತ್ತಿದ್ದರು. ಆಹ್ವಾನಿತರ ಮನೆಗಳಿಗೆ ತೆರಳಿ ಪೂಜಾದಿಗಳನ್ನು ನೆರವೇರಿಸಿ ಅವರ ಮನೆ-ಮನಗಳಲ್ಲಿ ಭಕ್ತಿ-ಶ್ರದ್ಧೆಗಳ ಜೀವಜಲ ಉಕ್ಕಿ ಹರಿಯುವಂತೆ ಮಾಡುತ್ತಿದ್ದರು. ಈ ರೀತಿ ದಾಸರು ನರಸೀಪುರದ ಸುತ್ತಮುತ್ತಲ ಗ್ರಾಮಗಳಲ್ಲದೆ ತುಮಕೂರು, ಕೊಡಿಗೇಹಳ್ಳಿ, ಹಿಕ್ಕಲ್ಲು, ಇರ್ಕಸಂದ್ರ, ಗುಬ್ಬಿ, ತಿಪಟೂರು, ದೇವನೂರು ಮುಂತಾದ ಅನೇಕ ಊರುಗಳಿಗೆ ಆಹ್ವಾನಿತರಾಗಿ ಹೋಗಿ ಕ್ಷೋಣಿತರನ್ನುದ್ಧರಿಸಿ ದಾಸಧರ್ಮವನ್ನು ಬೋಧಿಸಿದರು. ಭಕ್ತಜನರ ಅಪೇಕ್ಷೆಯಂತೆ ಶಿವಮೊಗ್ಗ, ಉಡುಪಿ, ಹೊಸಪೇಟೆ, ಆದವಾನಿ ಕೌತಾಳ, ಅನಂತಪುರ, ತಿರುಪತಿ, ಮುಳಬಾಗಿಲು ಇತ್ಯಾದಿ ಸ್ಥಳಗಳಿಗೂ ಭೇಟಿನೀಡಿ ತಮ್ಮ ಅಸ್ಖಲಿತ ವಾಣಿಯ ಮೂಲಕ ಜನಮನದಲ್ಲಿ ಭಗತತತ್ವಗಳನ್ನು ಬಿತ್ತಿದರು. ಅನುಗ್ರಹಾಕಾಂಕ್ಷಿಗಳಾಗಿ ಬಂದ ಹಲವಾರು ಪುಣ್ಯಜೀವಿಗಳ ಪ್ರಾರ್ಥನೆಯನ್ನು ಮನ್ನಿಸಿ, ಅವರ ಮನೋವಾಂಛೆಗಳನ್ನು ಪೂರ್ಣಮಾಡಿ, ಬಿಂಬಮೂರ್ತಿಯ ಪ್ರೇರಣೆಯಂತೆ ಅಂಕಿತೋಪದೇಶ ನೀಡಿ ಅವರ ಬದುಕನ್ನು ಹಸನಾಗಿಸಿದರು.

ಕರಿಗಿರೀಶನ ಕರುಣಾಪಾತ್ರರಾಗಿ, ದಯಾರ್ದ್ರ ಹೃದಯವುಳ್ಳ ತಂದೆ ಮುದ್ದುಮೋಹನದಾಸರು ತಮ್ಮ ಸಂಪರ್ಕಕ್ಕೆ ಬಂದ ಸಾವಿರಾರು ಸುಜೀವಿಗಳನ್ನು ಋಜುಮಾರ್ಗಕ್ಕೆ ಬರಲು ಪ್ರೇರೇಪಿಸಿದರಲ್ಲದೆ ನೊಂದವರ ನೋವುಗಳನ್ನೂ ಪರಿಹರಿಸಿದರು. ದೀನದಲಿತರ ದೈನ್ಯಾವಸ್ಥೆಯನ್ನು ಜಾತಿಮತಗಳನ್ನೆಣಿಸದೆ ದೂರಮಾಡಿ ಅವರಲ್ಲಿ ಅಪೂರ್ವ ಜೀವನೋತ್ಸಾಹ ವನ್ನು ತುಂಬಿದರು. ನಿರಾಸೆಗೊಂಡವರ ಹೃದಯಗಳಲ್ಲಿ ಹರಿನಾಮಾಮೃತ ವನ್ನು ಸಿಂಪಡಿಸಿ ಆತ್ಮವಿಶ್ವಾಸದಿಂದ ಬದುಕುವ ಆಶಾಕಿರಣವನ್ನು ಮೂಡಿಸಿದರು. ಬೇಡಿ ಬಂದವರ ಸಮಸ್ತ ಇಷ್ಟಾರ್ಥಗಳನ್ನೂ ಭಗವದನುಗ್ರಹ ದಿಂದ ಪೂರೈಸಿದರು.

ಪ್ರವಾಸಕಾಲದಲ್ಲಿ ದಿಗ್ವಿಜಯ ಪ್ರಾಣದೇವರ ಪ್ರತೀಕವನ್ನು ಹೊತ್ತು ಮುಂದೆ ಸಾಗುತ್ತಿದ್ದ ಪ್ರಿಯ ಶಿಷ್ಯರಾದ ಶ್ರೀವೇದವ್ಯಾಸಾಚಾರ್ಯರ ಮೂಲಕ ತಂದೆ ಮುದ್ದುಮೋಹನದಾಸರು ದುಃಖಿತರ ಸಮಸ್ಯೆಗಳಿಗೆ ಪರಿಹಾರೋಪಾಯ ಗಳನ್ನು ಸೂಚಿಸುತ್ತಿದ್ದರು. ಭಕ್ತರು ತಮ್ಮ ಪ್ರಾರ್ಥನೆಗಳನ್ನು ಸಲ್ಲಿಸಿದಾಗ ದಾಸರು ಸರ್ವವನ್ನೂ ತಿಳಿದಿದ್ದರೂ ಸಹ ಅದನ್ನು ಹೊರಗೆ ಪ್ರಕಟಪಡಿಸದೆ ಶಿಷ್ಯನನ್ನು ಕುರಿತು "ಏನಪ್ಪಾ ವೇದವ್ಯಾಸ ಏನು ಹೇಳುತ್ತೀಯ ಈ ಭಕ್ತರು ತಮ್ಮ ಅಭೀಷ್ಟಸಿದ್ಧಿಗಾಗಿ ಏನು ಮಾಡಬೇಕಪ್ಪಾ?" ಎಂದು ಪ್ರಶ್ನಿಸುತ್ತಿದ್ದರು. ಆಗ ಪ್ರಾಣಪ್ರತೀಕವನ್ನು ಹಿಡಿದಿರುತ್ತಿದ್ದ ವೇದವ್ಯಾಸಾಚಾರ್ಯರು ಗುರುಗಳ ಅದೇಶದಂತೆ ಹರಿವಾಯುಗಳ ಪ್ರೇರಣಾನುಸಾರ ಸೂಕ್ತ ಉಪಾಯಗಳನ್ನು ಸೂಚಿಸುತ್ತಿದ್ದರು. ವೇದವ್ಯಾಸಾಚಾರ್ಯರ ಸೂಚನೆಗಳನ್ನು ದಾಸರು ಅನುಮೋದಿಸಿ ಅದರಂತೆ ಮಾಡಲು ಬಂದ ಭಕ್ತರಿಗೆ ತಿಳಿಸಿ ಅಭಯ ನೀಡಿ ಆಶೀರ್ವದಿಸುತ್ತಿದ್ದರು. ಈ ಕ್ರಮದಲ್ಲಿ ದಾಸರು ಭಕ್ತಿಯ ಶಕ್ತಿಯಿಂದ ಅಸಂಖ್ಯಾತ ಮಹಿಮೆಗಳನ್ನು ಪ್ರಕಟಪಡಿಸಿದ್ದಾರೆ. ಶರಣು ಬಂದವರ ಸಂಕಷ್ಟಗಳನ್ನು ಕಳೆದು ಹರಿವಾಯುಗಳ ಅನುಗ್ರಹ ತುಂಬಿ ಬರುವಂತೆ ಮಾಡಿದ್ದಾರೆ. ಉದಾಹರಣೆ ಗಾಗಿ ಕೆಲವು ಪ್ರಸಂಗಗಳನ್ನು ಮಾತ್ರ ಇಲ್ಲಿ ಕೊಡಲಾಗಿದೆ.

ಕೊಡಿಗೇಹಳ್ಳಿ ನರಸಪ್ಪನವರ ಪುತ್ರರಾದ ಕೃಷ್ಣಪ್ಪನವರಿಗೆ ಸಹಿಸಲಸಾಧ್ಯ ವಾದ ಚಾತುರ್ಥಿಕ ಛಳಿ ಬರುತ್ತಿತ್ತು. ಯಾವುದೇ ವಿಧವಾದ ಔಷಧಿಪಥ್ಯ

ಗಳಿಂದಲೂ ಅವರ ವ್ಯಾಧಿ ನಿವಾರಣೆಯಾಗಲಿಲ್ಲ. ಕಡೆಗೆ ಅವರು ಮುಂದಿನ ಗತಿಕಾಣದೆ ಗುರುಗಳಾದ ಶ್ರೀತಂದೆ ಮುದ್ದುಮೋಹನದಾಸರಿಗೆ ಶರಣು ಬಂದರು. ಕರುಣಾಮೂರ್ತಿಗಳಾದ ದಾಸರು ನಂಬಿ ಬಂದವರನ್ನು ರಕ್ಷಿಸುವ ಸಂಕಲ್ಪ ಮಾಡಿ "ಪರಮಾತ್ಮನಿದ್ದಾನೆ ಚಿಂತಿಸಿಬೇಡಿ" ಎಂದು ಅವರನ್ನು ಸಂತೈಸಿದರು. ಒಂದು ತಂಬಿಗೆಯಲ್ಲಿ ಆಕಳ ಹಾಲನ್ನು ತರಿಸಿ ತಮ್ಮ ಬಿಂಬಮೂರ್ತಿಗೆ ಸಮರ್ಪಣೆ ಮಾಡಿ ಧನ್ವಂತ್ರಿಯ ಧ್ಯಾನ ಮಾಡುತ್ತಾ ಆ ಹಾಲನ್ನು ತಾವು ಸಂಪೂರ್ಣವಾಗಿ ಸ್ವೀಕರಿಸಿದರು. ನರಳುತ್ತಿದ್ದ ಕೃಷ್ಣಪ್ಪನವರನ್ನು ಆಶೀರ್ವದಿಸಿ "ಕೃಷ್ಣಪ್ಪನವರೇ ಯೋಚಿಸಬೇಡಿ, ಇನ್ನು ಮುಂದೆ ನಿಮಗೆ ಈ ಬಾಧೆ ತಟ್ಟುವುದಿಲ್ಲ" ಎಂದು ಹೇಳುತ್ತಾ ಅವರ ಶಿರಸ್ಪರ್ಷ ಮಾಡಿದರು. ಇದಾದ ನಂತರ ಕೃಷ್ಣಪ್ಪನವರು ಪೂರ್ಣ ಗುಣಹೊಂದಿದರು. ದಾಸರು ಹೇಳಿದಂತೆ ಮುಂದೆ ಅವರ ದೇಹಾಂತ್ಯದವರೆಗೂ ಚಾತುರ್ಥಿಕ ಛಳಿ ಕೃಷ್ಣಪ್ಪನವರನ್ನು ಕಾಡಲಿಲ್ಲ.

ಈ ಕೊಡಿಗೇಹಳ್ಳಿಯಲ್ಲಿಯೇ ದಾಸರಿಗೆ ಪರಿಚಯವಿದ್ದ ತಿಮ್ಮೇಗೌಡ ಎಂಬ ಕೃಷಿಕನೊಬ್ಬನಿದ್ದನು. ಅವನ ಮನೆಯಲ್ಲಿದ್ದ ಅನೇಕ ಹಸುಕರುಗಳ ನಡುವೆ ಒಂದು ಹಸು ಹಾಲು ಕರೆಯಲು ಬಿಡದೆ ಮುಟ್ಟಿದವರಿಗೆ ಒದೆಯುತ್ತಿತ್ತು. ದಾಸರಾಯರಲ್ಲಿ ಅತೀವ ನಿಷ್ಠೆಯುಳ್ಳ ಮುಗ್ಧಸ್ವಭಾವದ ಆ ಕೃಷಿಕನಿಗೆ ಏನು ತೋಚಿತೋ, ದಾಸರಲ್ಲಿ ಈ ವಿಷಯವನ್ನು ಬಿನ್ನವಿಸಿಕೊಂಡ. ಆಗ ದಾಸರು ನಗುತ್ತಾ ತಮ್ಮ ಹಸ್ತವನ್ನು ಹಸುವಿನ ಮೇಲಿಟ್ಟು ಯಾಕೆ ನಿರ್ದಯನಾದ್ಯೋ ಎಲೆ ಹರಿಯೇ ಶ್ರೀಕಾಂತ ಎನ ಮೇಲೆ ಎಳ್ಳಷ್ಟು ದಯವಿಲ್ಲ ಎಂಬ ಕೀರ್ತನೆಯನ್ನು ಹಾಡುತ್ತಾ ಅದರ ಮೈ ಸವರಿದರು. ದಾಸರ ಭಕ್ತಿಯ ಪಾಶಕ್ಕೆ ಗೋವಿಂದನೇ ವಶವಾಗಿರುವಾಗ ಅವರ ಮಾಂತ್ರಿಕ ಸ್ಪರ್ಶಕ್ಕೆ ನೋವು ವಶವಾಗುವುದು ಎಷ್ಟು ಹೊತ್ತು? ಅಂದಿನಿಂದ ಆ ಹಸು ಸಾಧುವಾಗಿ ಮಾರ್ಪಟ್ಟಿತ್ತಲ್ಲದೆ ಹಾಲು ಕರೆಯಲು ಸಹಕರಿಸಿ ಸಮೃದ್ಧವಾಗಿ ಕ್ಷೀರಧಾರೆ ಯನ್ನೇ ಸುರಿಸತೊಡಗಿತು. ಇದರಿಂದ ಸಂತೋಷಗೊಂಡ ತಿಮ್ಮೇಗೌಡ ತನ್ನ ಕೃತಜ್ಞತೆಯನ್ನು ಸೂಚಿಸಲು ಅನೇಕ ದಿನಗಳು ದೇವರ ಅಭಿಷೇಕಕ್ಕಾಗಿ ದಾಸರಿಗೆ ಕ್ಷೀರವನ್ನು ತಂದು ಕೊಡುತ್ತಿದ್ದನಂತೆ.

ತಿಪಟೂರಿನಲ್ಲಿದ್ದ ತಮ್ಮ ಅಳಿಯಂದಿರಾದ ಶ್ರೀಕೃಷ್ಣರಾಯರ ಮನೆಯಲ್ಲಿ ದಾಸರು ಸಂಚಾರತ್ವೇನ ಒಮ್ಮೆ ಬಿಡಾರ ಮಾಡಿದ್ದರು. ಅವರ ಮನೆಯ ಸಮೀಪದಲ್ಲಿ ಸಿಂಗ್ರಿ ನಂಜಪ್ಪ ಎಂಬ ಸಾಹುಕಾರನೊಬ್ಬ ವಾಸವಾಗಿದ್ದನು. ಆತನ ಪತ್ನಿ ಸಹಿಸಲಸಾಧ್ಯವಾದ ಉದರ ಶೂಲೆಯಿಂದ ನರಳುತ್ತಿದ್ದಳು. ಧನಿಕನಾದ ಅವನು ಹಲವಾರು ವೈದ್ಯರನ್ನು ಕರೆಸಿ ಚಿಕಿತ್ಸೆ ಮಾಡಿಸಿದರೂ ಆಕೆಗೆ ಗುಣಕಂಡಿರಲಿಲ್ಲ. ದಾಸರ ಮಹಿಮೆಯನ್ನು ಕೇಳಿ ಅವರ ಪಾದಕ್ರಾಂತನಾಗಿ ತನ್ನ ಪತ್ನಿಯ ಭಯಂಕರ ಉದರ ಶೂಲೆಯನ್ನು ಪರಿಹರಿಸುವಂತೆ ಅವನು ಬೇಡಿಕೊಂಡನು. ಭಕ್ತಿಯಿಂದ ಪ್ರಾರ್ಥಿಸಿದ ಸಿಂಗ್ರಿ ನಂಜಪ್ಪನಿಗೆ ತಮ್ಮ ಕ್ರಮದಂತೆ ಪ್ರಾಣ ಪ್ರತೀಕವನ್ನು ಹೊತ್ತಿದ್ದ ಶಿಷ್ಯರಾದ ವೇದವ್ಯಾಸಾಚಾರ್ಯರ ಮೂಲಕ ಪರಿಹಾರ ಮಾರ್ಗವನ್ನು ಸೂಚಿಸಿ ಅಭಯಪ್ರದಾನ ಮಾಡಿದರು. ಆತನಿಂದ ಶ್ರೀಗೋಪಾಲದಾಸರ ರಚನೆಯಾದ "ಎನ್ನ ಬಿನ್ನಪ ಕೇಳೋ ಧನ್ವಂತ್ರಿ ದಯಮಾಡೋ ಸಣ್ಣವನು ಇವ ಕೇವಲ" ಎಂಬ ದೇವರನಾಮವನ್ನು ಹನ್ನೆರಡುದಿವಸ ಪ್ರತಿನಿತ್ಯ ಪಾರಾಯಣ ಮಾಡಿಸಿದರು. ಇದರಿಂದ ಧನ್ವಂತ್ರಿ ನಾಮಕ ಪರಮಾತ್ಮನ ಒಲುಮೆಯುಂಟಾಗಿ ಆಕೆ ರೋಗದಿಂದ ಸಂಪೂರ್ಣ ಮುಕ್ತಳಾದಳು. ಪರಮ ಸಂತುಷ್ಟನಾದ ಸಿಂಗ್ರಿ ನಂಜಪ್ಪ ತನ್ನ ಪತ್ನಿಯಿಂದೊಡಗೂಡಿ ದಾಸರನ್ನು ಬಹುಪರಿಯಾಗಿ ಸತ್ಕರಿಸಿ ಸನ್ಮಾನಿಸಿದನು.

ಇದೇ ರೀತಿ ಅನಂತಪುರದ ಭಕ್ತನೊಬ್ಬನ ಹೆಂಡತಿ ಮರಣಾವಸ್ಥೆಯಲ್ಲಿದ್ದಾಗ "ಎನ್ನ ಬಿನ್ನಪ ಕೇಳೋ ಧನ್ವಂತ್ರಿ ದಯಮಾಡೋ" ಎಂಬ ಕೀರ್ತನೆಯನ್ನೇ ಹದಿನಾರು ಸಲ ಭಕ್ತಿಯಿಂದ ಪುನಶ್ಚರಣೆಗೈದು ಆಕೆಗೆ ಬಂದ ಗಂಡಾಂತರವನ್ನು ನಿವಾರಣೆ ಮಾಡಿದರು.

ಆದವಾನಿಯಲ್ಲಿ ಒಮ್ಮೆ ಪ್ರವಾಸ ಮಾಡುತ್ತಿದ್ದಾಗ ರಾಘವೇಂದ್ರರಾಯ ರೆಂಬುವರು ತಮ್ಮ ಉನ್ನತವಾದ ಸರ್ಕಾರಿ ಉದ್ಯೋಗವನ್ನು ಕಳೆದುಕೊಂಡು ಬಲು ದೈನ್ಯಾವಸ್ಥೆಯಲ್ಲಿದ್ದರು. ಅವರ ಸಂಕಟವನ್ನು ಕಂಡು ಮನಕರಗಿ ದಾಸರು ಇಪ್ಪತ್ತೊಂದು ದಿನಗಳ ಕಾಲ ಶ್ರೀವಾದಿರಾಜರಿಂದ ಮಾನ್ಯವಾದ ಶ್ರೀಹರಿವಾಯುಸ್ತುತಿಯನ್ನು ಪುನಶ್ಚರಣೆ ಮಾಡಲು ಸೂಚಿಸಿದರು. ಇದರಂತೆ ಮಾಡಲು ರಾಘವೇಂದ್ರರಾಯರಿಗೆ ಕಳೆದುಕೊಂಡಿದ್ದ ಉದ್ಯೋಗ ಆಶ್ಚರ್ಯಕರವಾದ ರೀತಿಯಲ್ಲಿ ಪುನಃ ಲಭಿಸಿತು.

ಇದೇ ತರಹ ಕರಿಗಿಯ ರಥೋತ್ಸವದ ಸಂದರ್ಭದಲ್ಲಿ ಬಹು ವರ್ಷಕಾಲ ಅಗಲಿದ್ದ ದಂಪತಿಗಳನ್ನು ಚಮತ್ಕಾರಿಕವಾಗಿ ಮತ್ತೆ ಒಂದುಗೂಡಿಸಿದರು. ಪುನರ್ಮಿಲನದ ಭಾಗ್ಯವೊದಗಿಸಿದ ತಂದೆ ಮುದ್ದುಮೋಹನದಾಸರ ಕಾರುಣ್ಯವನ್ನು ಕೊಂಡಾಡಿದ ಆ ದಂಪತಿಗಳು ದಾಸರ ಶಿಷ್ಯರಾಗಿ ಅವರಿಂದ ಅಂಕಿತೋಪದೇಶವನ್ನೂ ಪಡೆದುಕೊಂಡರು.

ಈ ಮಾದರಿಯಲಿ ದಾಸರು ಹತಾಶೆಗೊಂಡವರಲ್ಲಿಯೂ ಭಕ್ತಿಯ ಮಧುರ ಸ್ಪರ್ಶದಿಂದ ನವಚೈತನ್ಯ ಮೂಡಿಸಿ ಅವರ ಬಾಳನ್ನು ಹಸನು ಮಾಡಿದರು. ಶರಣಾಗತರನ್ನು ಸಂರಕ್ಷಿಸಲು ಅನೇಕ ಅತಿಮಾನುಷವಾದ ಮಹಿಮೆಗಳನ್ನು ತೋರಿದರು. ಆಕರ್ಷಕವಾದ ತಮ್ಮ ಸಹಜೋಕ್ತಿಗಳಿಂದ ಸನಾತನವಾದ ಭಾಗವತ ಧರ್ಮದ ತಿರುಳನ್ನು ಪ್ರಕಟಿಸಿ ಹರಿದಾಸರ ಸುವರ್ಣಮಯ ಅಧ್ಯಾಯವನ್ನು ಪುನಃ ಪ್ರಾರಂಭಿಸಿದರು. ಕ್ರಿ.ಶ. 1900ರಿಂದ 1912ರವರೆಗೆ ಹನ್ನೆರಡು ವರ್ಷಗಳ ಕಾಲ ಭಕ್ತಾದಿಗಳ ಅಪೇಕ್ಷೆಯಂತೆ ಹಲವಾರು ಊರುಗಳಲ್ಲಿ ಪ್ರವಾಸ ಮಾಡಿ ಅನೇಕ ಸುಜೀವಿಗಳಿಗೆ ಅಂಕಿತೋಪದೇಶ ನೀಡಿ ಅಪಾರ ಶಿಷ್ಯ ಸಂಪತ್ತನ್ನು ಗಳಿಸಿದರು. ಚಿಪ್ಪಗಿರಿ, ಮಂತ್ರಾಲಯ, ತಿರುಪತಿ ಮುಂತಾದ ಪುಣ್ಯಕ್ಷೇತ್ರಗಳಿಗೆ ಭೇಟಿಯಿತ್ತು ಅಲ್ಲಿ ಸನ್ನಿಹಿತವಾಗಿರುವ ಭಗವದ್ರೂಪಗಳ ಸಂದರ್ಶನದಿಂದ ಪುಳಕಿತರಾದರು. ಭಾವಪರವಶರಾಗಿ ಭಗವನ್ನಾಮ ಸಂಕೀರ್ತನೆಯ ಮೂಲಕ ಸುತ್ತಮುತ್ತಲ ಪರಿಸರವನ್ನು ಪವಿತ್ರಗೊಳಿಸಿದರು. ತಮ್ಮ ವ್ಯಕ್ತಿತ್ವದಿಂದ ಪ್ರಭಾವಿತರಾಗಿ ಬಂದ ಸಾಧನಯೋಗ್ಯ ಜೀವಿಗಳಿಗೆ ಅವರ ಅಪೇಕ್ಷೆಯಂತೆ ದಾಸದೀಕ್ಷೆಯನ್ನಿತ್ತು. ದಾಸಧರ್ಮವನ್ನು ಬೋಧಿಸಿ ದಾಸಪಂಥಕ್ಕೆ ಪುನಶ್ಚೇತನವನ್ನು ನೀಡಿದರು.

ಹೀಗೆ ತಂದೆ ಮುದ್ದುಮೋಹನ ದಾಸರು ತಮ್ಮ ದೀರ್ಘಕಾಲದ ಪ್ರವಾಸವನ್ನು ಪೂರ್ಣಗೊಳಿಸಿ ಕರಿಗಿರಿ ಕ್ಷೇತ್ರಕ್ಕೆ ಬಂದು ಕ್ಷೇತ್ರಪ್ರಭುವೂ, ತಮ್ಮ ಉಪಾಸ್ಯಮೂರ್ತಿಯೂ ಆದ ಶ್ರೀಲಕ್ಷ್ಮೀ ನರಸಿಂಹಸ್ವಾಮಿಗೆ ಸಮಸ್ತವನ್ನೂ ಸಮರ್ಪಿಸಿದರಲ್ಲದೆ ಸಂಚಾರ ಕಾಲದಲ್ಲಿ ಸಂಗ್ರಹವಾಗಿದ್ದ ಒಂದು ಸಹಸ್ರ ರೂಪಾಯಿಗಳನ್ನು ಶ್ರೀಲಕ್ಷ್ಮೀನರಸಿಂಹಸ್ವಾಮಿಯ ಸೇವೆ ಪ್ರತಿಶನಿವಾರ

ಶಾಶ್ವತವಾಗಿ ನಡೆಯುವಂತೆ ಪುದುವಟ್ಟು ಇಟ್ಟು ಕೊಡಿಗೇಹಳ್ಳಿಯ ಮೂಲಕ ಸ್ವಗ್ರಾಮವಾದ ನರಸೀಪುರಕ್ಕೆ ಹಿಂದಿರುಗಿದರು. [1]

## ಬೆಂಗಳೂರಿಗೆ ಆಗಮನ

ಹನ್ನೆರಡು ವರ್ಷಗಳಷ್ಟು ದೀರ್ಘ ಕಾಲದ ಪ್ರವಾಸವನ್ನು ಮುಗಿಸಿಕೊಂಡು ತಂದೆ ಮುದ್ದುಮೋಹನ ದಾಸರು ನರಸೀಪುರಕ್ಕೆ ಮರಳಿ ಬಂದ ಮೇಲೆ ಮತ್ತೆ ಸಚ್ಛಾಸ್ತ್ರಾವಲೋಕನದಲ್ಲಿಯೂ, ದಾಸಧರ್ಮ ಪ್ರಚಾರ ಕಾರ್ಯದಲ್ಲಿಯೂ ನಿರತರಾದರು. ಸ್ವಲ್ಪ ಸಮಯದ ನಂತರ ಅವರಿಗೆ ಕಲ್ಯಾಣನಗರಿ ಎಂದು ಪ್ರಸಿದ್ಧವಾದ ಬೆಂಗಳೂರು ನಗರಕ್ಕೆ ಹೋಗಿ ನೆಲೆಸುವ ಅಪೇಕ್ಷೆಯುಂಟಾಯಿತು. ಕುಗ್ರಾಮವಾದ ನರಸೀಪುರಕ್ಕಿಂತ ದೊಡ್ಡ ಪಟ್ಟಣವಾದ ಬೆಂಗಳೂರಿನಲ್ಲಿ ಅನೇಕ ವಿದ್ವಜ್ಜನರ ಸಂಪರ್ಕವಾಗುವುದಲ್ಲದೆ ದಾಸಧರ್ಮ ಪ್ರಚಾರಕ್ಕೆ ವಿಸ್ತಾರವಾದ ಕಾರ್ಯ ಕ್ಷೇತ್ರವೂ ದೊರಕುವುದು; ಶಾಸ್ತ್ರಾವಲೋಕನವೂ ಸುಲಭವಾಗುವುದು; ಸಜ್ಜನರ ಸಂಘಟನೆಗೆ ವಿಪುಲ ಅವಕಾಶಗಳೂ ಲಭ್ಯವಾಗುವುವು; ಕ್ಷಿಪ್ರಗತಿಯಲ್ಲಿ ತಮ್ಮ ಗುರುವಾಜ್ಞೆಯನ್ನು ನೆರವೇರಿಸಲೂ ಅವಕಾಶವಾಗುವುದು ಎಂದು ದಾಸರು ವಿಚಾರ ಮಾಡಿದರು. ಅದರಂತೆ ತಮ್ಮ ಮನೆಯವರೊಂದಿಗೆ, ಆತ್ಮೀಯ ಬಂಧುಗಳೊಂದಿಗೆ ಸಮಾಲೋಚಿಸಿ, ನರಸೀಪುರದಲ್ಲಿರುವ ತಮ್ಮ ಅಲ್ಪ ಸ್ವಲ್ಪ ಆಸ್ತಿಯನ್ನು ಮಾರಾಟ ಮಾಡಿ ಬೆಂಗಳೂರು ನಗರಕ್ಕೆ ಬಂದಿಳಿದೇ ಬಿಟ್ಟರು. ಸಾಮಾನ್ಯವಾಗಿ ಕಾಡುವ ಸ್ಥಳೀಯ ವ್ಯಾಮೋಹ ದಾಸರನ್ನು ಕಾಡಲಿಲ್ಲ. ಕ್ಷಿಪ್ರಕಾರ್ಯ ಸಾಧನೆಗಾಗಿ ಕಾತರಿಸುವ ಹರಿದಾಸರು ತಮ್ಮ

---

1. ದಾಸರು ಕೊಡಿಗೇಹಳ್ಳಿಗೆ ಬಂದ ಸಂದರ್ಭದಲ್ಲಿ ಆ ಸ್ಥಳದ ಭಕ್ತರಿಂದಲೇ ಪ್ರಾಪ್ತವಾಗಿದ್ದ ಪ್ರಾಣದೇವರ ಪ್ರತೀಕ ವಿಸ್ಮಯಕರ ರೀತಿಯಲ್ಲಿ ಅದೃಶ್ಯವಾಯಿತಂತೆ. ಅನತಿ ಕಾಲದಲ್ಲಿಯೇ ಅವರ ಪ್ರಿಯಶಿಷ್ಯರಾದ ಶ್ರೀವೇದವ್ಯಾಸಾಚಾರ್ಯರೂ ಸಹ ಪರಲೋಕ ಪ್ರಯಾಣ ಮಾಡಿದರು. ಇದಾದ ನಂತರ ದಾಸರಿಗೆ ಇನ್ನು ಮುಂದೆ ಸಂಚಾರ ಕೈಗೊಳ್ಳುವುದು ಪರಮಾತ್ಮನ ಸಂಕಲ್ಪಕ್ಕೆ ಬಂದಿಲ್ಲವೆಂದು ಅನ್ನಿಸಿತು. ಒಂದೇ ಸ್ಥಳದಲ್ಲಿ ನೆಲೆನಿಂತು ಮೋಕ್ಷಪ್ರದವಾದ ಶ್ರೀಮನ್ಮಧ್ವಶಾಸ್ತ್ರಾವಲೋಕನದಲ್ಲಿ ನಿರತರಾಗಿ ಗುರುವಾಜ್ಞೆಯಂತೆ ದಾಸಪಂಥವನ್ನು ವ್ಯಾಪಕವಾಗಿ ಬೆಳೆಸಬೇಕೆಂದು ದಾಸರು ನಿರ್ಧರಿಸಿದರು.

ಉದ್ದೇಶದ ಸಫಲತೆಗಾಗಿ ನಿರ್ವಿಕಾರ ಚಿತ್ತದೊಂದಿಗೆ ನಿರ್ಮಮತ್ವವನ್ನೂ, ನಿರ್ಲಿಪತ್ತೆಯನ್ನೂ ಹೊಂದಿರಬೇಕೆಂದು ತಮ್ಮ ಕೃತಿಯ ಮೂಲಕ ದಾಸರು ತೋರಿಸಿಕೊಟ್ಟರು. ಅಂದಿನಿಂದ ಮುಂದೆ ಸುಮಾರು ಇಪ್ಪತ್ತೈದು ವರ್ಷಗಳ ಕಾಲ ಕಲ್ಯಾಣ ನಗರಿಯಾದ ಬೆಂಗಳೂರು ತಂದೆ ಮುದ್ದುಮೋಹನದಾಸರ ವಾಸಸ್ಥಾನವಾಯಿತು.

ಬೆಂಗಳೂರು ದಾಸರಿಗೆ ಹೊಸದೇನೂ ಆಗಿರಲಿಲ್ಲ. ಹಿಂದೆ ಪಂಡಿತರಾದ ಶ್ರೀಚಿಂಚೋಳಿ ವೆಂಕಣ್ಣಾಚಾರ್ಯರಲ್ಲಿ ಶಾಸ್ತ್ರವ್ಯಾಸಂಗ ಮಾಡುತ್ತಿದ್ದಾಗ ಕೆಲವು ವರ್ಷ ಬೆಂಗಳೂರಿನಲ್ಲಿದ್ದರು. ನಂತರ ಜೀವನ ನಿರ್ವಹಣೆಯ ಸಲುವಾಗಿ ವ್ಯಾಪಾರದ ವ್ಯಾಜದಿಂದ ಸ್ವಲ್ಪ ಸಮಯ ಬೆಂಗಳೂರಿನಲ್ಲಿ ನೆಲೆಸಿದ್ದರು. ಆಗಾಗ ಸಂಚಾರತ್ವೇನ ಈ ಸ್ಥಳಕ್ಕೆ ಭೇಟಿ ನೀಡಿದ್ದರು. ಈಗಂತೂ ಹರಿದಾಸ ದೀಕ್ಷಾಬದ್ಧರಾಗಿ ದಾಸಧರ್ಮ ಪ್ರಚಾರದಲ್ಲಿ ತೊಡಗಿದ್ದರಿಂದ ಮತ್ತು ಪ್ರವಚನಕಾರರಾಗಿ ಹಲವಾರು ಧಾರ್ಮಿಕ ಉಪನ್ಯಾಸಗಳನ್ನು ನೀಡುತ್ತಿದುದ್ದರಿಂದ ಅವರ ಹೆಸರು ಸಾಕಷ್ಟು ಜನಜನಿತವಾಗಿತ್ತು. ದೇವರಾಯನದುರ್ಗದ ದಾಸಕೂಟ ಸಭಾಸ್ಥಾಪಕರೆಂಬ ಖ್ಯಾತಿಯೂ ಇತ್ತು. ಹಾಗಾಗಿ ದಾಸರಿಗೆ ಬೆಂಗಳೂರಿನಲ್ಲಿ ಅನೇಕ ಪರಿಚಿತ ಮಿತ್ರರಿದ್ದರು. ಅವರಲ್ಲಿ ಹರಿದಾಸ ಸಾಹಿತ್ಯ ಪ್ರೇಮಿಗಳಲ್ಲದೆ, ಪಂಡಿತರೂ, ಸಮಾಜದಲ್ಲಿ ಉನ್ನತವಾದ ಸ್ಥಾನ–ಮಾನಗಳನ್ನು ಗಳಿಸಿಕೊಂಡಿರುವ ಗಣ್ಯವ್ಯಕ್ತಿಗಳೂ ಇದ್ದರು. ಮೈಸೂರು ಸಂಸ್ಥಾನದ ದೊಡ್ಡ ಅಧಿಕಾರಿಗಳೂ, ರಾಜಸಭಾ ಭೂಷಣರೂ ಆಗಿದ್ದ ಶ್ರೀಕರ್ಪೂರ ಶ್ರೀನಿವಾಸರಾಯರು ದಾಸರ ಮಿತ್ರರಲ್ಲಿ ಒಬ್ಬರು. ಅವರು ಆಗ ಬೆಂಗಳೂರು ಚಾಮರಾಜಪೇಟೆಯಲ್ಲಿ ವಾಸಿಸುತ್ತಿದ್ದರು. ದಾಸರ ಕೀರ್ತಿಯನ್ನು ಕೇಳಿ ಬಲ್ಲವರಾಗಿದ್ದ ಕರ್ಪೂರ ಶ್ರೀನಿವಾಸರಾಯರು ದಾಸರ ಧೀರೋದ್ಧಾತ್ತವಾದ ಆಕರ್ಷಕ ವ್ಯಕ್ತಿತ್ವ, ನಡೆ–ನುಡಿಗಳಲ್ಲಿ ಕಂಡುಬರುತ್ತಿದ್ದ ಸಾಮ್ಯತೆ ಮತ್ತು ಪಾರದರ್ಶಿಕತ್ವ, ಪ್ರಕಾಂಡ ಪಾಂಡಿತ್ಯ, ಸರಳವಾದ ಸೌಮ್ಯ ಸ್ವಭಾವ ಮುಂತಾದವುಗಳನ್ನು ತುಂಬಾ ಮೆಚ್ಚಿಕೊಂಡಿದ್ದರು. ದ್ವೈತ ಸಿದ್ಧಾಂತವನ್ನು ಪ್ರತಿಪಾದಿಸುವ ಸಂಸ್ಕೃತೋಕ್ತಿಗಳನ್ನೂ ಅದಕ್ಕೆ ಪೂರಕವಾಗಿ ಹರಿದಾಸರ ಕನ್ನಡ ವಚನಗಳನ್ನೂ ಉದಾಹರಿಸಿ ಸುಲಿದ ಬಾಳೆಯ ಹಣ್ಣನ್ನು ತೆರೆದಿಡುವಂತೆ ಸುಲಲಿತ ಶೈಲಿಯಲ್ಲಿ ಮಾಡುತ್ತಿದ್ದ ದಾಸರ ಪ್ರವಚನವನ್ನು ಒಮ್ಮೆ ಕೇಳಿ ಬಹು

ಸಂತೋಷಪಟ್ಟು ಅವರಿಗೆ 1921ರಲ್ಲಿ ಒಂದು ಮೆಚ್ಚುಗೆಯ ಪತ್ರವನ್ನೂ ಸಹ ನೀಡಿದ್ದರು.

ತಂದೆ ಮುದ್ದುಮೋಹನದಾಸರು ಬೆಂಗಳೂರಿಗೆ ಬಂದ ಕೂಡಲೇ ಶ್ರೀನಿವಾಸರಾಯರು ಮುಂದಾಗಿ ದಾಸರನ್ನು ಚಾಮರಾಜಪೇಟೆಯ ತಮ್ಮ ಮನೆಗೆ ಆಹ್ವಾನಿಸಿದರು. ಮತ್ತು ವಾಸಮಾಡಲು ತಮ್ಮ ಮನೆಯಲ್ಲೇ ಪ್ರತ್ಯೇಕ ಸ್ಥಳವನ್ನು ಏರ್ಪಡಿಸಿದರು. ಅದರಂತೆ ದಾಸರು ಕರ್ಪೂರ ಶ್ರೀನಿವಾಸರಾಯರ ಮನೆಯಲ್ಲಿ ವಾಸಿಸುತ್ತಾ ಸಮೀಪದಲ್ಲಿಯೇ ಇದ್ದ ತಮ್ಮ ವಿದ್ಯಾ ಗುರುಗಳಾದ ಶ್ರೀಚಿಂಚೋಳಿ ವೆಂಕಣ್ಣಾಚಾರ್ಯರಿಂದ ಸ್ಥಾಪಿತವಾದ ಪ್ರಾಣದೇವರ ಗುಡಿಯಲ್ಲಿ "ಹರಿಕಥಾಮೃತಸಾರ"ವನ್ನು ಪ್ರವಚನ ಮಾಡುತ್ತಾ ಸಜ್ಜನರನ್ನು ಆಕರ್ಷಿಸತೊಡಗಿದರು. ಆ ಸಂದರ್ಭದಲ್ಲಿ ದಾಸರಿಗೆ ಅನೇಕ ಭಗವದ್ಭಕ್ತರ ಸಂಪರ್ಕವಾಯಿತು. ಅವರ ಪ್ರಾರ್ಥನೆಯನ್ನು ಮನ್ನಿಸಿ ದಾಸರು ಬೆಂಗಳೂರಿನ ನಾನಾ ಧಾರ್ಮಿಕ ಕೇಂದ್ರಗಳಲ್ಲಿ ಹಾಗೂ ಭಕ್ತಾದಿಗಳ ಮನೆಗಳಲ್ಲಿ ಸಹ ವಿವಿಧ ಅಧ್ಯಾತ್ಮಿಕ ವಿಷಯಗಳನ್ನು ಕುರಿತು ಉಪನ್ಯಾಸ ನೀಡುತ್ತಿದ್ದರು. ಅನೇಕರು ದಾಸರ ಉಪದೇಶಾಮೃತದಿಂದ ಪರಿವರ್ತಿತರಾಗಿ ಅವರ ಅಭಿಮಾನಿಗಳಾದರು. ದಾಸ–ವ್ಯಾಸ ಕೂಟದ ಸಮಾನತತ್ವಗಳಾದ ಶ್ರೀಹರಿ ಸರ್ವೋತ್ತಮತ್ವ, ವಾಯು ಜೀವೋತ್ತಮತ್ವ, ಜೀವ–ಈಶ ಭೇದ ಮುಂತಾದವುಗಳನ್ನು ಮನಮುಟ್ಟುವಂತೆ ವ್ಯಾಖ್ಯಾನಿಸಿ ಶಿಷ್ಯರ ಸಂಶಯಗಳನ್ನು ನಿವಾರಿಸುತ್ತಿದ್ದರು. ಅನೇಕ ಸುಜೀವಿಗಳು ದಾಸರಿಂದ ಪ್ರಭಾವಿತರಾಗಿ ಭವಬಂಧನದಿಂದ ನಿವೃತ್ತಿ ಹೊಂದುವ ಅಂಕಿತೋಪದೇಶವನ್ನು ಅವರಿಂದ ಸ್ವೀಕರಿಸಿ ಹರಿದಾಸರಾಗಿದ್ದರು. ಆದರೆ ಇನ್ನು ಕೆಲವರು ಪ್ರಾರಂಭದಲ್ಲಿ ದಾಸರ ಬಾಹ್ಯರೂಪವನ್ನಷ್ಟೆ ನೋಡಿ ತಪ್ಪಾಗಿ ತಿಳಿದು ತದನಂತರ ಅವರ ಸಂಪರ್ಕ ನಿಕಟವಾಗುತ್ತಿದ್ದಂತೆ, ಅವರ ಪಾಂಡಿತ್ಯಪೂರ್ಣ ಅನುಭವೋಕ್ತಿಗಳನ್ನು ಕೇಳಿ ಬೆರಗಾಗಿ ತಮ್ಮ ಅಭಿಪ್ರಾಯವನ್ನು ಬದಲಾಯಿಸಿಕೊಂಡಿದ್ದಲ್ಲದೆ ಅವರನ್ನು ಮುಕ್ತಕಂಠದಿಂದ ಪ್ರಶಂಸಿಸುತ್ತಿದ್ದದ್ದೂ ಉಂಟು.

ಹೀಗಿರುವಾಗ ದಾಸರ ಅಳಿಯಂದಿರಾದ ಶ್ರೀಕೃಷ್ಣರಾಯರು ಬೆಂಗಳೂರಿನ ವಿಶ್ವೇಶ್ವರಪುರ ಬಡಾವಣೆಯಲ್ಲಿ ಮನೆಕಟ್ಟಿಕೊಂಡು ಬಂದರು. ಗೃಹಪ್ರವೇಶ

ಸಮಾರಂಭದ ನಂತರ ಸರ್ಕಾರಿ ಉದ್ಯೋಗ ನಿಮಿತ್ತ ತಾವು ಕುಟುಂಬ ಸಮೇತ ಬೇರೆ ಊರಿಗೆ ಹೋಗಬೇಕಾಗಿದ್ದುದ್ದರಿಂದ ಮಾವನವರಾದ ದಾಸರನ್ನು ತಮ್ಮ ಮನೆಯಲ್ಲಿಯೇ ಇರುವಂತೆ ಪ್ರಾರ್ಥಿಸಿದರು. ಅಳಿಯಂದಿರ ಆಹ್ವಾನವನ್ನು ಮನ್ನಿಸಿ ದಾಸರು ತಮ್ಮ ವಾಸಸ್ಥಾನವನ್ನು ವಿಶ್ವೇಶ್ವರಪುರಕ್ಕೆ ಬದಲಾಯಿಸಿದರು. ಹೊಸದಾಗಿ ಕಟ್ಟಿದ ಆ ಮನೆಗೆ "ಆನಂದ ನಿಲಯ" ಎಂದು ಹೆಸರಿಟ್ಟರು. ಪ್ರತಿನಿತ್ಯ ಶ್ರೀಮದಾನಂದತೀರ್ಥ ವಿರಚಿತ ಗ್ರಂಥಗಳ ನಿರಂತರ ಪಾಠಪ್ರವಚನಗಳಿಂದ "ಆನಂದ ನಿಲಯ" ಹೆಸರಿಗೆ ತಕ್ಕ ಹಾಗೆ ಆನಂದಮಯವಾಗಿಯೇ ಪರಿಣಮಿಸಿತು. ಮುಂದೆ ಸುಮಾರು ಹದಿನೆಂಟು ವರ್ಷಗಳ ಕಾಲ ಇದು ದಾಸರ ವಾಸಸ್ಥಾನವಾಗಿ ಹರಿದಾಸರ ಸಂಗಮಸ್ಥಳವಾಗಿ ಅನೇಕ ಧಾರ್ಮಿಕ ಚಟುವಟಿಕೆಗಳ ಸ್ಫೂರ್ತಿಕೇಂದ್ರವಾಗಿ, ಸಾಧಕರ "ಆನಂದ ನಿಲಯ"ವಾಗಿ ಪ್ರಖ್ಯಾತವಾಯಿತು.

## ಪ್ರವಚನ ಚಾತುರ್ಯ

ತಂದೆ ಮುದ್ದುಮೋಹನದಾಸರ ವಾಕ್ ಶೈಲಿ ಅಪ್ರತಿಮವಾದದ್ದು. ಯಾವುದೇ ಅಡೆತಡೆಯಿಲ್ಲದೆ ನೇರ ಗತಿಯಲ್ಲಿ ಸಾಗುವ ಶುದ್ಧ ಗಂಗಾ ಪ್ರವಾಹದ ಹಾಗೆ ದಾಸರ ವಾಣಿ ನಿರರ್ಗಳವಾಗಿ ಹೊರಹೊಮ್ಮುತ್ತಿತ್ತು. ಹರಿದಾಸ ಚತುಷ್ಟಯರಲ್ಲಿ ಒಬ್ಬರೆಂದು ಹೆಸರಾದ ಶ್ರೀಜಗನ್ನಾಥದಾಸವರ್ಯರ "ಹರಿಕಥಾಮೃತಸಾರ" ದಾಸರಿಗೆ ಪ್ರಿಯವಾದ ಗ್ರಂಥವಾಗಿತ್ತು. ಹರಿಕಥಾಮೃತಸಾರದ ಎಲ್ಲಾ ಪದ್ಯಗಳೂ ದಾಸರಿಗೆ ಕಂಠಸ್ಥವಾಗಿದ್ದವು. ಅವುಗಳನ್ನು ದಾಸರು ನಿರರ್ಗಳವಾಗಿ ಹಾಡುತ್ತಿದ್ದರು. ಪ್ರತಿಯೊಂದು ಅಕ್ಷರಕ್ಕೂ ಕೊಡಬೇಕಾದ ಮಹತ್ವ ಕೊಟ್ಟು ಸ್ಪಷ್ಟವಾಗಿ ಉಚ್ಚರಿಸುತ್ತಾ ಪದವಿಂಗಡನೆ ಮಾಡಿ ಅರ್ಥ ಸ್ಫುರಿಸುವಂತೆ ಸಾದರಪಡಿಸುವ ಅವರ ವಾಚನ ಶೈಲಿಯೇ ಮೋಹಕವಾಗಿತ್ತು. ಗ್ರಂಥಕರ್ತರ ಹೃದಯವನ್ನು ಅರಿತು, ಶಾಸ್ತ್ರ ವಿರೋಧವಾಗದಂತೆ, ಪರಮಾತ್ಮನ ಮಹಾತ್ಮ್ಯೆಗೆ ಕುಂದು ಬರದಂತೆ, ತತ್ವಪ್ರಮೇಯಗಳನ್ನೂ, ವಿಶೇಷಾರ್ಥಗಳನ್ನೂ ಸುಂದರವಾಗಿ ಸರಮಾಲೆಯಂತೆ ಪೋಣಿಸಿ ಮಗುವಿಗೂ ಅರ್ಥವಾಗುವಂತಹ ಸುಲಭ ವಿಧಾನದಲ್ಲಿ ದಾಸರು ವ್ಯಾಖ್ಯಾನಿಸುತ್ತಿದ್ದರು. "ಹರಿಕಥಾಮೃತಸಾರ"ವನ್ನು

ಕುರಿತು ದಾಸರು ಮಾಡುವ ಪ್ರವಚನದಿಂದ ಪ್ರಭಾವಿತರಾಗಿ ಅನೇಕರು ಆ ಗ್ರಂಥದ ಬಗ್ಗೆ ಆಳವಾದ ಒಲವನ್ನು ಹೊಂದಿದ್ದರಲ್ಲದೆ ಪ್ರತಿನಿತ್ಯ ಅದನ್ನು ಶ್ರದ್ಧೆಯಿಂದ ಪಾರಾಯಣ ಮಾಡಲು ಪ್ರಾರಂಭಿಸಿದರು. ಕೇವಲ ಕರ್ನಾಟಕ ರಾಜ್ಯದವರಷ್ಟೇ ಅಲ್ಲದೆ ಹೊರರಾಜ್ಯದ ಭಕ್ತರೂ ಸಹ ದಾಸರು ಮಾಡುವ ವ್ಯಾಖ್ಯಾನದ ಶೈಲಿಯನ್ನು ಮೆಚ್ಚಿಕೊಂಡಿದ್ದರು.

ಪಾಂಡಿತ್ಯದ ಅಡಿಪಾಯದ ಮೇಲೆ ಹರಿದಾಸರ ವಚನಗಳನ್ನೂ ಬಳಸಿಕೊಂಡು ಸುಭದ್ರವಾದ ಸುಂದರ ಸೌಧವನ್ನು ಕಲಾತ್ಮಕವಾಗಿ ನಿರ್ಮಾಣ ಮಾಡುತ್ತಿದ್ದ ದಾಸರಿಗೆ ರಾಮಾಯಣ, ಮಹಾಭಾರತ, ಭಗವದ್ಗೀತೆ, ಭಾಗವತ ಮುಂತಾದವುಗಳಲ್ಲಿಯೂ ಅಪರಿಮಿತವಾದ ಪರಿಶ್ರಮವಿತ್ತು. ಶ್ರೀಮನ್ಮಧ್ವಶಾಸ್ತ್ರದಲ್ಲಿಯೂ ಸಮಾನವಾದ ಪ್ರಭುತ್ವವಿತ್ತು. ಸಂಸ್ಕೃತ ಶ್ಲೋಕಗಳು, ಸುಭಾಷಿತಗಳು, ಮರಾಠಿ ಅಭಂಗಗಳು, ಶಿವಶರಣರ ವಚನಗಳು, ಕಬೀರ್, ಗುರುನಾನಕ್ ಮುಂತಾದವರ ತತ್ವಪಂಕ್ತಿಗಳು ದಾಸರಿಗೆ ಹೃದ್ಗತವಾಗಿದ್ದವು. ಕುರಾನ್, ಬೈಬಲ್ ಮೊದಲಾದ ಪರಮತೀಯ ಗ್ರಂಥೋಕ್ತ ವಾಕ್ಯಗಳನ್ನೂ ಸಹ ಪುಂಖಾನುಪುಂಖವಾಗಿ ಸಂದರ್ಭಕ್ಕೆ ತಕ್ಕಂತೆ ದಾಸರು ತಮ್ಮ ಉಪನ್ಯಾಸದಲ್ಲಿ ಬಳಸುತ್ತಿದ್ದರು. ಯಾವ ಮತಕ್ಕೆ ಸೇರಿದವರೇ ಆಗಲಿ ದಾಸರ ಉಪನ್ಯಾಸದ ಶೈಲಿಯನ್ನು ಮೆಚ್ಚಿಕೊಳ್ಳುತ್ತಿದ್ದರು. ವಿಷಯ ಯಾವುದಾದರೂ ಸರಿಯೇ ದಾಸರ ಉಪನ್ಯಾಸದ ಗತಿ ಬದಲಾಗುತ್ತಿರಲಿಲ್ಲ. ಹುರುಪು ಹದ ತಪ್ಪುತ್ತಿರಲಿಲ್ಲ. ಒಮ್ಮೆ ಆಚಾರ, ಒಮ್ಮೆ ವಿಚಾರ, ಒಮ್ಮೆ ಹಾಸ್ಯ, ಮತ್ತೊಮ್ಮೆ ವ್ಯಂಗ್ಯ, ಒಮ್ಮೆ ಪ್ರೇಮ, ಮತ್ತೊಮ್ಮೆ ಗಾಂಭೀರ್ಯ – ಹೀಗೆ ಎಲ್ಲಾ ಭಾವಗಳನ್ನು ಮಿಶ್ರಣ ಮಾಡಿ, ಭಕ್ತಿರಸಭರಿತವಾಗಿ, ಪರಮಾತ್ಮನ ಮಹತ್ಮ್ಯಾಜ್ಞಾನ ಪೂರ್ವಕವಾದ ಭಾವಧಾರೆಯ ರಭಸಕ್ಕೆ ಹೃತ್ಕದ ತೆರೆಯುವಂತೆ ದಾಸರು ಉಪನ್ಯಾಸ ಮಾಡುತ್ತಿದ್ದರು.

ದಾಸರ ಮಾತುಗಾರಿಕೆಯ ಕಲೆಯನ್ನು ಗುರುತಿಸಿ ಆಗಿನ ಸರ್ಕಾರ ಬೆಂಗಳೂರು ಜೈಲಿನ ಕೈದಿಗಳಿಗೆ ಧರ್ಮೋಪದೇಶ ನೀಡಲು ದಾಸರನ್ನು ನೇಮಿಸಿತ್ತು. ದಾಸರ ಉಪದೇಶದಿಂದ ಕೈದಿಗಳಿಗೆ ತಮ್ಮ ಒಪ್ಪಿನ ಅರಿವಾಗಿ ಪಶ್ಚಾತ್ತಾಪದಿಂದ ಪರಿತಪಿಸುವರೆಂದೂ, ತನ್ಮೂಲಕ ಪರಿಶುದ್ಧರಾಗಿ ಸಮಾಜದ ಸತ್ಪ್ರಜೆಗಳಾಗಿ ಮಾರ್ಪಡುವರೆಂದೂ ಕಾರಾಗೃಹದ ಅಧಿಕಾರಿಗಳು ನಂಬಿದ್ದರು.

ದಾಸರು ಅಧಿಕಾರಿಗಳ ನಂಬುಗೆಯನ್ನು ಹುಸಿ ಮಾಡಲಿಲ್ಲ. ಪ್ರತಿ ಶನಿವಾರ ಸರ್ಕಾರ ಕಳುಹಿಸುವ ಕುದುರೆಗಾಡಿಯಲ್ಲಿ[1] ಕುಳಿತು ದಾಸರು ಕಾರಾಗೃಹಕ್ಕೆ ಹೋಗುತ್ತಿದ್ದರು. ಪ್ರತಿಯೊಬ್ಬ ಕೈದಿಯ ಪೂರ್ವಾಪರಗಳನ್ನು ಅರಿತು ಅವರ ಮಟ್ಟಕ್ಕೆ ಮುಟ್ಟುವಂತೆ ಬೋಧನಾ ಕ್ರಮದಲ್ಲಿ ವೈಯಕ್ತಿಕ ಗಮನ ಕೊಡುತ್ತಿದ್ದರು. ಕತ್ತಲೆಯಲ್ಲಿ ಕೈಹಿಡಿದು ಮುನ್ನಡೆಸುವ ಆತ್ಮಬಂಧುವಿನ ನುಡಿಗಳನ್ನಾಲಿಸುವಂತೆ ಕೈದಿಗಳು ದಾಸರ ಉಪನ್ಯಾಸಕ್ಕಾಗಿ ಜಾತಕ ಪಕ್ಷಿಯಂತೆ ಪ್ರತಿವಾರ ಎದುರು ನೋಡುತ್ತಿದ್ದರು. ದಾಸರ ಭವ್ಯ ನಿಲುವು, ಗಾಂಭೀರ್ಯ, ಕರುಣಾಶೀಲ ಸ್ವಭಾವ ಗೌರವಾದರಗಳನ್ನು ಹುಟ್ಟಿಸುವಂತಿತ್ತಲ್ಲದೆ ವಾತ್ಸಲ್ಯಭರಿತವಾದ ಅವರ ಹಿತೋಕ್ತಿಗಳು ಕೈದಿಗಳ ಮನಸ್ಸಿನ ಮೇಲೆ ಮೋಡಿಯನ್ನೇ ಮಾಡಿಬಿಟ್ಟಿದ್ದವು. ಕಠಿಣತರ ಶಿಕ್ಷೆಗಳಿಂದಲೂ ಸಾಧ್ಯವಾಗದ ಪವಾಡಸದೃಶ ಪರಿವರ್ತನೆ ಅಂತರಂಗವರಿತು ಮಾಡುವ ಸದ್ಬೋಧನೆಯಿಂದ ಸಾಧ್ಯ ಎಂದು ದಾಸರು ತೋರಿಸಿಕೊಟ್ಟರು. ದಾಸರ ಹಿತೋಪದೇಶ ಗುರುತರ ಅಪರಾಧ ಮಾಡಿದ ನೂರಾರು ಕೈದಿಗಳ ಹೃದಯ ಪರಿವರ್ತನೆಗೆ ಕಾರಣವಾಯಿತು. ಸತ್ಪಥ ಹಿಡಿಯಲು ಪ್ರೇರಣೆ ನೀಡಿತು. ಇದು ದಾಸರು ಮಾಡಿದ ಮಹತ್ಸಾಧನೆಗಳಲ್ಲಿ ಒಂದು.

ತಂದೆ ಮುದ್ದುಮೋಹನದಾಸರು ಕಾರಾಗೃಹದ ಅಧಿಕಾರಿಗಳ ಅಪೇಕ್ಷೆಯಂತೆ ತಾವು ಬೆಂಗಳೂರಿನಲ್ಲಿ ಇರುವವರೆಗೂ ಪ್ರತಿವಾರ ಜೈಲಿನ ಕೈದಿಗಳಿಗೆ ಧರ್ಮೋಪದೇಶ ಕಾರ್ಯಕ್ರಮವನ್ನು ತಪ್ಪದೆ ನಡೆಸಿಕೊಂಡುಬಂದರು. ಇದು ದಾಸರು ಬೆಂಗಳೂರನ್ನು ತ್ಯಜಿಸಿ ದೇವರಾಯನದುರ್ಗಕ್ಕೆ ಹೋಗಿ ನೆಲೆಸುವವರೆಗೂ ಮುಂದುವರೆಯಿತು.

ತಂದೆ ಮುದ್ದುಮೋಹನದಾಸರ ಪಾಂಡಿತ್ಯ, ವಾಕ್ಚಾತುರ್ಯ ಮತ್ತು ಸರಳ ವ್ಯಕ್ತಿತ್ವ ಪಂಡಿತ ಪಾಮರರಿಗಲ್ಲದೆ ಅನೇಕ ಪೀಠಾಧಿಪತಿಗಳಿಗೂ

---

1. ಕೈದಿಗಳನ್ನುದ್ದೇಶಿಸಿ ಭಾಷಣ ಮಾಡಲು ದಾಸರನ್ನು ಕಾರಾಗೃಹಕ್ಕೆ ಕುದುರೆಗಾಡಿಯಲ್ಲಿ ಕರೆತರುವ ಸಂದರ್ಭದಲ್ಲಿ ಗಾಡಿಯವರು 'ನಾ ಮುಂದು ತಾ ಮುಂದು' ಎಂದು ಮುಗಿಬೀಳುತ್ತಿದ್ದರಂತೆ. ಏಕೆಂದರೆ ದಾಸರಾಯರು ಗಾಡಿಯಲ್ಲಿ ಕುಳಿತರೆ ಆ ದಿನವೆಲ್ಲಾ ಗಾಡಿಯವನಿಗೆ ಕೈತುಂಬಾ ಸಂಪಾದನೆಯಾಗುತ್ತಿತ್ತು.

ಪ್ರಿಯವಾಗಿದ್ದವು. ನಾಡಿನ ನಾನಾ ಪೀಠಾಧಿಪತಿಗಳು ದಾಸರ ಉಪನ್ಯಾಸವನ್ನು ಮತ್ತು ಕೀರ್ತನ ಕೌಶಲ್ಯವನ್ನು ಮೆಚ್ಚಿಕೊಂಡಿದ್ದರು. ದಾಸರಿಗೆ ಆಶೀರ್ವಾದಪೂರ್ವಕವಾಗಿ ಬಿರುದು ಬಿನ್ನವತ್ತಳೆಗಳನ್ನು ನೀಡಿ ಸನ್ಮಾನಿಸಿದ್ದರು. ಉಡುಪಿಯ ಅಷ್ಟಮಠಗಳಲ್ಲಿ ಒಂದಾದ ಪುತ್ತಿಗೆ ಮಠಾಧೀಶರಾಗಿದ್ದ ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರಿಗೆ ದಾಸರ ಪ್ರವಚನವನ್ನು ಒಮ್ಮೆ ಕೇಳುವ ಸಂದರ್ಭ ಒದಗಿ ಬಂದಿತು. ಆಗ ದಾಸರು ಬೆಂಗಳೂರಿನ ಸಿದ್ದೀಕಟ್ಟೆಯ ಗುಂಡೋಪಂತರ ಬೀದಿಯಲ್ಲಿರುವ ಶ್ರೀಕೃಷ್ಣ ಮಂದಿರದಲ್ಲಿ "ಹರಿಕಥಾಮೃತಸಾರ"ವನ್ನು ಕುರಿತು ಪ್ರವಚನ ಮಾಡುತ್ತಿದ್ದರು. ಕೃಷ್ಣ ಮಂದಿರದಲ್ಲಿಯೇ ಬಿಡಾರ ಮಾಡಿದ್ದ ಶ್ರೀಗಳವರು ದಾಸರ ಪ್ರವಚನವನ್ನು ಪೂರ್ಣವಾಗಿ ಶ್ರವಣ ಮಾಡಿದರು. ಹರಿಕಥಾಮೃತಸಾರದ ಮೂವತ್ತೆರಡು ಸಂಧಿಯ ಎಲ್ಲಾ ಪದ್ಯಗಳನ್ನೂ ಪುಸ್ತಕದ ನೆರವಿಲ್ಲದೆ ಸುಸ್ವರದಲ್ಲಿ ಹಾಡುತ್ತಾ ಅದಕ್ಕೆ ಪೂರಕವಾಗಿ ಸಂಸ್ಕೃತ ಶಾಸ್ತ್ರಪಂಕ್ತಿಗಳನ್ನು ಉಲ್ಲೇಖಿಸುತ್ತಾ ಮನೋಜ್ಞವಾಗಿ ವ್ಯಾಖ್ಯಾನ ಮಾಡುತ್ತಿದ್ದ ದಾಸರ ಸರಸ ಶೈಲಿ ಶ್ರೀಗಳವರಿಗೆ ತುಂಬಾ ಮೆಚ್ಚುಗೆಯಾಯಿತು. ಶ್ರೀಗಳವರು ದಾಸರನ್ನು ಮುಕ್ತಕಂಠದಿಂದ ಪ್ರಶಂಸಿಸಿದರಲ್ಲದೆ ಪರಮಾನುಗ್ರಹಪೂರ್ವಕವಾಗಿ "ಪರಮಪ್ರಿಯ" ಎಂಬ ಬಿರುದನ್ನು ನೀಡಿ ಗೌರವಿಸಿದರು. ಶತಾಯುಷಿಗಳೂ, ತಪಸ್ವಿಗಳೂ ಆಗಿದ್ದ ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರ ಆಶೀರ್ವಚನ ಸುಳ್ಳಾಗಲಿಲ್ಲ. ತಂದೆ ಮುದ್ದುಮೋಹನದಾಸರು ಶ್ರೀಪಾದಂಗಳವರು ನೀಡಿದ ಬಿರುದಿನಂತೆ ಪರಮಪ್ರಿಯರೇ ಆದರು.

ಉತ್ತರಾದಿ ಮಠಾಧೀಶರಾಗಿದ್ದ ಶ್ರೀಸತ್ಯಧ್ಯಾನತೀರ್ಥ ಶ್ರೀಪಾದಂಗಳವರೂ ಸಹ ದಾಸರ ವಾಕ್ಚಾತುರ್ಯವನ್ನೂ, ವಿದ್ಯಾ ಪ್ರೌಢಿಮೆಯನ್ನೂ ಬಲ್ಲವರಾಗಿದ್ದರು. ದಾಸರ ಸಚ್ಚಾರಿತ್ರ್ಯವನ್ನು ಶ್ರೀಗಳವರು ಬಹಳ ಮೆಚ್ಚಿಕೊಂಡಿದ್ದರು. ತಮ್ಮ ಮಠಕ್ಕೆ ದಾಸರನ್ನು ಆಗಾಗ ಆಹ್ವಾನಿಸಿ ಅವರ ಪ್ರವಚನಗಳನ್ನು ಏರ್ಪಡಿಸುತ್ತಿದ್ದರಲ್ಲದೆ ತಿರುಪತಿ ಕ್ಷೇತ್ರದಲ್ಲಿ ಸ್ಥಾಪಿತಗೊಂಡಿದ್ದ "ಶ್ರೀಮಧ್ವಸಿದ್ಧಾಂತೋನ್ನಾಹಿನೀ ಸಭೆ"ಗೆ ದಾಸರನ್ನು ಧರ್ಮದರ್ಶಿಗಳನ್ನಾಗಿ ನೇಮಕ ಮಾಡಿದರು. ದಾಸರು ಶ್ರೀನಿವಾಸನ ದಿವ್ಯ ಸನ್ನಿಧಿಯಲ್ಲಿ ಸಭೆಯ ಧರ್ಮದರ್ಶಿ ಸ್ಥಾನವನ್ನು ಸುಮಾರು ಹತ್ತು ವರ್ಷಗಳ ಕಾಲ ಅಲಂಕರಿಸಿದರು.

ಸಭೆ ತಿರುಪತಿಯಲ್ಲಿ ನಡೆಸುತ್ತಿದ್ದ ಹರಿದಾಸ ಸಾಹಿತ್ಯದ ಪರೀಕ್ಷೆಗಳಲ್ಲಿ ಪರೀಕ್ಷಕರಾಗಿಯೂ ಕಾರ್ಯ ನಿರ್ವಹಿಸಿ ಹರಿದಾಸ ವಾಙ್ಮಯಕ್ಕೆ ಅಪೂರ್ವ ಸೇವೆ ಸಲ್ಲಿಸಿದರು.

ಅಬ್ಬೂರು ವ್ಯಾಸರಾಜ ಮಠಾಧೀಶರು. ಮಂತ್ರಾಲಯ ರಾಘವೇಂದ್ರ ಮಠಾಧೀಶರು, ಮುಳಬಾಗಿಲಿನ ಶ್ರೀಪಾದರಾಜ ಮಠಾಧೀಶರು, ಉಡುಪಿಯ ಅಷ್ಟಮಠಗಳ ಯತಿಗಳು ಹಾಗೂ ಇನ್ನಿತರ ಪೀಠಾಧಿಪತಿಗಳ ಒಲುಮೆಗೂ ತಂದೆ ಮುದ್ದುಮೋಹನದಾಸರು ಪಾತ್ರರಾಗಿದ್ದರು.

## 'ಪರಮಾರ್ಥ ಚಂದ್ರೋದಯ'

ಎಲ್ಲರಿಗೂ 'ಪರಮಪ್ರಿಯ'ರಾಗಿ ಅಸ್ಖಲಿತವಾದ ತಮ್ಮ ವಿದ್ವತ್ಪೂರ್ಣ ವಾಣಿಯಿಂದ ಸಮಾಜದಲ್ಲಿ ಧರ್ಮಜಾಗೃತಿಯನ್ನು ಮೂಡಿಸುತ್ತಿದ್ದ ತಂದೆ ಮುದ್ದುಮೋಹನದಾಸರು ದಾಸಧರ್ಮ ಪ್ರಚಾರವನ್ನು ಇನ್ನಷ್ಟು ತೀವ್ರಗತಿಯಿಂದ ಮಾಡಲು ಧಾರ್ಮಿಕ ಪತ್ರಿಕೆಯೊಂದನ್ನು ಹೊರತರಬೇಕೆಂದು ಸಂಕಲ್ಪಿಸಿದರು. ಮಾತಿಗೆ ಕಿವಿಯಳತೆಯ ಮಿತಿಯಿದೆ; ಆದರೆ ಮುದ್ರಾಕ್ಷರದ ವ್ಯಾಪ್ತಿ ಹಿರಿದಾದದ್ದು, ಅಧಿಕಕಾಲ ನಿಲ್ಲುವಂಥದ್ದು. ಪತ್ರಿಕೆಯ ಮೂಲಕ ಹರಿದಾಸರು ಸಾರಿದ ಅಧ್ಯಾತ್ಮಿಕ ತತ್ವಗಳನ್ನು ಮತ್ತು ತಮ್ಮ ವಿಚಾರಧಾರೆಯನ್ನು ಹೆಚ್ಚು ಜನಕ್ಕೆ ತಲುಪುವಂತೆ ಪರಿಣಾಮಕಾರಿಯಾಗಿ ಮುಟ್ಟಿಸಲು ಸಾಧ್ಯವಾಗುವುದು ಎಂದು ದಾಸರು ಅಭಿಪ್ರಾಯಪಟ್ಟರು. ನಾಡಿನ ಹಲವಾರು ಗಣ್ಯರು ಮತ್ತು ಹರಿದಾಸ ಸಾಹಿತ್ಯಾಭಿಮಾನಿಗಳು ದಾಸರ ಅಭಿಪ್ರಾಯವನ್ನು ಅನುಮೋದಿಸಿದರು. ರಾಜಸಭಾ ಭೂಷಣ ಶ್ರೀಕರ್ಪೂರ ಶ್ರೀನಿವಾಸರಾಯರು ದಾಸರ ಬೆನ್ನು ತಟ್ಟಿ ಹುರಿದುಂಬಿಸಿದರು. ಆಸ್ಥಾನ ವಿದ್ವಾನ್ ದೊಡ್ಡಬೆಲೆ ನಾರಾಯಣ ಶಾಸ್ತ್ರಿಗಳು, ರಂಗಭೂಮಿ ಕಲಾಸಾಮ್ರಾಟರಾಗಿದ್ದ ಶ್ರೀ ಡಿ.ಕೆ. ಭಾರದ್ವಾಜರೇ ಮೊದಲಾದ ಅನೇಕ ಪ್ರತಿಷ್ಠಿತ ವ್ಯಕ್ತಿಗಳು ಶುಭ ಹಾರೈಸಿದರು. ದಾಸರಿಗೆ 'ಪರಮಪ್ರಿಯ' ಎಂಬ ಬಿರುದನ್ನು ನೀಡಿದ ಉಡುಪಿ ಪುತ್ತಿಗೆ ಮಠಾಧೀಶರಾದ ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರು ಹಾಗೂ ದಾಸರ ಕುಲಗುರುಗಳಾದ ಕುಂದಾಪುರ ವ್ಯಾಸರಾಜ ಮಠಾಧೀಶರಾದ ಶ್ರೀಲಕ್ಷ್ಮೀಮನೋಜ್ಞತೀರ್ಥ ಶ್ರೀಪಾದಂಗಳವರು ಫಲಮಂತ್ರಾಕ್ಷತೆಯನ್ನಿತ್ತು

ಆಶೀರ್ವದಿಸಿದರು. ದಾಸರ ಶಿಷ್ಯರನೇಕರು ಸಹಕರಿಸಲು ಉತ್ಸಾಹದಿಂದ ಮುಂದೆ ಬಂದರು. ಇವೆಲ್ಲದರ ಫಲವಾಗಿ ಕ್ರಿ.ಶ. 1927ರ ಪ್ರಭವನಾಮ ಸಂವತ್ಸರದ ಚೈತ್ರ ಶುದ್ಧ ಪ್ರತಿಪದೆಯಂದು ತಂದೆ ಮುದ್ದುಮೋಹನ ದಾಸರಿಂದ "ಪರಮಾರ್ಥ ಚಂದ್ರೋದಯ" ಮಾಸಪತ್ರಿಕೆ ಉದಯವಾಯಿತು.

ದಾಸರು "ಪರಮಾರ್ಥ ಚಂದ್ರೋದಯ" ಮಾಸಪತ್ರಿಕೆಯನ್ನು ಧರ್ಮಜಾಗೃತಿಯ, ನೈತಿಕ ಪುನರುತ್ಥಾನದ ದಿವ್ಯಾಸ್ತ್ರವಾಗಿ ಮಾಡಿಕೊಂಡು ಪ್ರತೀತಿಂಗಳೂ ಹಲವಾರು ಪ್ರಸ್ತುತ ವಿಷಯಗಳನ್ನು ಕುರಿತು ಲೇಖನಗಳನ್ನು ಬರೆಯುತ್ತಿದ್ದರು. ಹಲವಾರು ವಿದ್ವಾಂಸರನ್ನೂ, ಪ್ರತಿಭಾನ್ವಿತ ಲೇಖಕರನ್ನೂ ಹುರಿದುಂಬಿಸಿ ಪತ್ರಿಕೆಗೆ ಬರೆಯುವಂತೆ ಪ್ರೇರೇಪಿಸುತ್ತಿದ್ದರು. ಅನೇಕ ಉದಯೋನ್ಮುಖ ಲೇಖಕರನ್ನೂ ಪ್ರೋತ್ಸಾಹಿಸಿ ಅವರ ಬರಹಗಳನ್ನು ತಮ್ಮ ಪತ್ರಿಕೆಯಲ್ಲಿ ನಿಯಮಿತವಾಗಿ ಪ್ರಕಟಿಸಿದರು.

ದಾಸರು ಪ್ರಕಟಿಸುತ್ತಿದ್ದ "ಪರಮಾರ್ಥ ಚಂದ್ರೋದಯ"ದ ಸಂಚಿಕೆಗಳನ್ನು ಈಗ ತಿರುವಿ ಹಾಕಿದರೆ ವಿಸ್ಮಯ ಹುಟ್ಟಿಸುತ್ತವೆ. ಆಗ ಅಕ್ಷರಸ್ಥರ ಸಂಖ್ಯೆ ಕಡಿಮೆ ಮತ್ತು ಹಣ ಕೊಟ್ಟು ಪತ್ರಿಕೆಯನ್ನು ಕೊಳ್ಳುವ ಸ್ಥಿತಿವಂತರೂ ಕಡಿಮೆ. ಪತ್ರಿಕೋದ್ಯಮ ಒಂದು ಸಾಹಸದ ಕಾರ್ಯವಾಗಿತ್ತು. ಆಧುನಿಕ ತಂತ್ರಜ್ಞಾನ ಅಭಿವೃದ್ಧಿಯಾಗಿಲ್ಲದ ಕಾರಣ ಪತ್ರಿಕೆಯ ಸಂಪಾದನೆ, ಮುದ್ರಣ, ವಿತರಣೆ ಇತ್ಯಾದಿ ಈಗಿನಷ್ಟು ಸುಲಭವಾಗಿರಲಿಲ್ಲ. ಅಂತಹ ಸಂದರ್ಭದಲ್ಲಿ ದಾಸರು ಪತ್ರಿಕೆಯನ್ನು, ಅದರಲ್ಲೂ ಧಾರ್ಮಿಕ ಪತ್ರಿಕೆಯನ್ನು ಹೊರತರುವ ಸಾಹಸಕ್ಕೆ ಕೈ ಹಾಕಿದರು. ಕಷ್ಟ-ನಷ್ಟಗಳಿಗಂಜದೆ, ಲಾಭದ ದೃಷ್ಟಿಯನ್ನು ಇಟ್ಟುಕೊಳ್ಳದೆ ಸಮಾಜದ ಓರೆ-ಕೋರೆಗಳನ್ನು ತಿದ್ದುವ ಮತ್ತು ಧರ್ಮಜಾಗೃತಿಯನ್ನುಂಟು ಮಾಡುವ ಪ್ರಮುಖ ಉದ್ದೇಶದಿಂದ ದಾಸರು ನಿಯಮಿತವಾಗಿ ಪತ್ರಿಕೆಯನ್ನು ಪ್ರಕಟಿಸಿದರು. ಪರಸ್ಥಳದವರಿಗೆ ಅಂಚೆಯ ಮೂಲಕ ಪತ್ರಿಕೆಯನ್ನು ಕಳುಹಿಸುತ್ತಿದ್ದರು. ವಾಹನ ಸೌಲಭ್ಯ ಸಮರ್ಪಕವಾಗಿಲ್ಲದಿದ್ದ ಆ ಕಾಲದಲ್ಲಿ ಪತ್ರಿಕೆಯ ಸ್ಥಳೀಯ ವಿತರಣೆಯ ವ್ಯವಸ್ಥೆಯನ್ನು ತಾವೇ ಹೊತ್ತರು. ಮಳೆ, ಗಾಳಿ, ಬಿಸಿಲೆನ್ನದೆ ತಮ್ಮ ಜೋಳಿಗೆಯಲ್ಲಿ "ಪರಮಾರ್ಥ ಚಂದ್ರೋದಯ" ವನ್ನಿಟ್ಟುಕೊಂಡು ನಡೆದೇ ಹೋಗಿ ಓದುಗರಿಗೆ ಹರಿಕೀರ್ತನೆಯೊಂದಿಗೆ ಪತ್ರಿಕೆಯನ್ನೂ ಮುಟ್ಟಿಸುತ್ತಿದ್ದರು.

ಈ ಕಾಲಕ್ಕೆ ಹೋಲಿಸಿದಾಗ ದಾಸರು ಆಗ ಬಳಸುತ್ತಿದ್ದ ಭಾಷೆ ಮತ್ತು ಶೈಲಿ ಸ್ವಲ್ಪ ಹಳೆಯದಾಗಿ ತೋರುತ್ತದೆ. ವಾಕ್ಯ ರಚನೆಯೂ ಸಾಕಷ್ಟು ದೀರ್ಘವಾಗಿದ್ದು ಪದಗಳು ಒಂದಕ್ಕೊಂದು ಸರಪಳಿಯಂತೆ ಸೇರಿಕೊಂಡು ಮುಂದೆ ಎಲ್ಲೋ ಒಂದು ಕಡೆ ಕೊನೆಗೊಳ್ಳುತ್ತವೆ. ಇದು ಸುಮಾರು ಎಪ್ಪತ್ತೈದು ವರ್ಷಗಳ ಹಿಂದಿನ ಬರವಣಿಗೆಯೆಂದು ನಾವು ನೆನಪಿನಲ್ಲಿಟ್ಟುಕೊಳ್ಳಬೇಕು. ಆದರೆ ದಾಸರ ಭಾಷೆಯಲ್ಲಿ, ಹೇಳುವ ಕ್ರಮದಲ್ಲಿ ಕಂಡುಬರುವ ಸರಳತೆ, ಪ್ರಾಮಾಣಿಕತೆ ಗಮನಾರ್ಹ. ವಿಷಯವನ್ನು ಗೋಜಲುಗೊಳಿಸದೆ ದಾಸರು ಹೇಳಬೇಕಾದ್ದನ್ನು ನೇರವಾಗಿ ಹೇಳುತ್ತಾರೆ. ದಾಸರ ತತ್ವನಿಷ್ಠೆ ಪ್ರಖರವಾದದ್ದು. ಸಿಕ್ಕಿದ ಅವಕಾಶವನ್ನು ವ್ಯರ್ಥಗೊಳಿಸದೆ ದಾಸರು ತಮಗೆ ಪ್ರಿಯವಾದ ಹಿತೋಪದೇಶಕ್ಕೆ ಮತ್ತು ಧರ್ಮಬೋಧೆಗೆ ಬಳಸಿಕೊಳ್ಳುತ್ತಾರೆ. ಹಾಗೆ ನೋಡಿದರೆ 'ಪರಮಾರ್ಥ ಚಂದ್ರೋದಯ'ದ ಮುಖ್ಯ ಉದ್ದೇಶವೇ ಜ್ಞಾನತತ್ವೋಪದೇಶ.

ದಾಸರು ಪತ್ರಿಕೆಯನ್ನು ನಿಯಮಬದ್ಧವಾಗಿ ನಡೆಸಲು ತುಂಬಾ ಶ್ರಮಪಟ್ಟಿರಬೇಕು. ಆರ್ಥಿಕ ಮುಗ್ಗಟ್ಟಿಗೆ ಒಳಗಾಗಿ ಪರಿತಪಿಸಿರಬೇಕು. ಕಾಲಕಾಲಕ್ಕೆ ಚಂದಾದಾರರು ಸರಿಯಾಗಿ ಚಂದಾಹಣ ಕಳುಹಿಸದಿದ್ದಾಗ ದಾಸರು ನಿರ್ವಾಹವಿಲ್ಲದೆ ಅವರುಗಳಿಗೆ ಪತ್ರಿಕೆಗಳನ್ನು ವಿ.ಪಿ. ಮೂಲಕ ಕಳುಹಿಸಿರಬೇಕು. ಅವುಗಳು ಸ್ವೀಕೃತವಾಗದೆ ವಾಪಸ್ಸು ಬರತೊಡಗಿದಾಗ ಅವರು ಸಹಜವಾಗಿ ಕಳವಳಕ್ಕೀಡಾಗಿರಬೇಕು. ಇದಕ್ಕೆ ಅವರು ಪತ್ರಿಕೆಯಲ್ಲಿ ಆಗಾಗ ಮಾಡಿಕೊಳ್ಳುತ್ತಿದ್ದ ವಿನಂತಿಗಳೇ ಸಾಕ್ಷಿಯಾಗಿವೆ. ದಾಸರು ಹೀಗೆ ಚಂದಾದಾರರಲ್ಲಿ ಮಾಡಿಕೊಂಡ "ಪರಮಾರ್ಥನ ಹೃದಯ ನಿವೇದನ" ಎಂಬುದು ನಿಜಕ್ಕೂ ಹೃದ್ರಾವಕವಾಗಿದೆ:

"ಉದಾರ ಹೃದಯರಾದ ವರ್ಗಣಿದಾರರೆ, ನಮ್ಮ ಪತ್ರಿಕೆಯೆಂಬುದು ಒಂದು ಹೆಣ್ಣುಹಕ್ಕಿ ಮತ್ತು ಅಬಲೆ. ಇದು ಪತ್ರಗಳ ಎಂದರೆ – (ರೆಕ್ಕೆಗಳ) ಸಹಾಯವಿಲ್ಲದೆ ಸಂಚರಿಸಲಾರದು. ಮಹನೀಯರೇ, ನಿಮ್ಮ ಹೃದಯಂಗಮವಾದ ಸಹಾಯವೇ ಈ ಹಕ್ಕಿಯ ರೆಕ್ಕೆಗಳು. ಈ ಅಂಶವನ್ನು ದಯಾರ್ದ್ರ ಹೃದಯರಾದ ತಾವು ಚೆನ್ನಾಗಿ ಯೋಚಿಸಿ ತಮ್ಮ ಸಹಾಯ ದ್ರವ್ಯವನ್ನು ಈ ದಾಸನ ಮೇಲೆ ಮಮತೆಯನ್ನಿಟ್ಟು ಒಡನೆ ದಯಮಾಡಿ

ಕಳುಹಿಸಿ, ಈ ಬಡಹಕ್ಕಿಯ ಜೀವಿಕೆಯನ್ನು ಕನಿಕರದಿಂದ ಕಾಪಾಡಬೇಕೆಂದು ವಿನಯಪೂರ್ವಕ ಅರಿಕೆ – ಪರಮಾರ್ಥ ಚಂದ್ರೋದಯದ ಸಂಪಾದಕ"

ಪತ್ರಿಕೆಯೆಂಬ 'ಹಕ್ಕಿ' ರೆಕ್ಕೆಗಳ ಸಹಾಯದಿಂದ ದಾಸರ ಜೀವಿತದ ಅಂತ್ಯದವರೆಗೂ ಹಾಗೂ ಹೀಗೂ ಹಾರಾಡಿತು. ಕೆಲ ಸಮಯದ ನಂತರ ನಿಂತುಹೋಯಿತು. ದಾಸರ ನಿರ್ಯಾಣವಾದ ಮೇಲೆ ಅವರ ಪುತ್ರರಾದ ಶ್ರೀವೆಂಕಟರಾಯದಾಸರು ಪತ್ರಿಕೆಗೆ ಪುನರ್ಜೀವ ನೀಡಿ ಸ್ವಲ್ಪಕಾಲ ನಡೆಸಿದರು. ಗುರುಪುತ್ರರು 'ದಾಸಕೂಟ ಸಭಾಮಂದಿರ'ದ ಕಾರ್ಯದರ್ಶಿಯಾಗಿ ಅನೇಕ ಕಾರ್ಯಭಾರಗಳನ್ನು ವಹಿಸಿಕೊಂಡರಲ್ಲದೆ ಪತ್ರಿಕೆಗೆ ಮತ್ತೆ ಜೀವಕಳೆ ತುಂಬಿ ದಾಸ ಸಾಹಿತ್ಯ ಪ್ರಚಾರ ಮುಂದುವರೆಯುವಂತೆ ನೋಡಿಕೊಂಡರು. ದಾಸರ ಶಿಷ್ಯರು ವಿಶೇಷವಾಗಿದ್ದ ಪ್ರೊದಟೂರು, ಮೈಸೂರು, ಬೆಂಗಳೂರು, ಹೈದರಾಬಾದ್ ಮುಂತಾದ ಸ್ಥಳಗಳಲ್ಲಿ ಪ್ರವಾಸ ಕೈಗೊಂಡು ಪತ್ರಿಕೆಯ ಪ್ರಸಾರ ಸಂಖ್ಯೆಯನ್ನು ಹೆಚ್ಚಿಸಿದರು. ಅವರ ಕಾಲಾನಂತರ "ಪರಮಾರ್ಥ ಚಂದ್ರೋದಯ" ಸುಮಾರು ಎರಡು ದಶಕಗಳಿಗೂ ಹೆಚ್ಚು ಕಾಲ ಆಸ್ತಿಕರ ಹೃನ್ಮನಗಳಿಗೆ ಅಹ್ಲಾದವೀಯುತ್ತಿದ್ದ ಸವಿನೆನಪನ್ನು ಮಾತ್ರ ಉಳಿಸಿ ಕಣ್ಮರೆಯಾಯಿತು.

## ಶಿಷ್ಯ ಸಂಗ್ರಹಣೆ

ಗುರುವಾಜ್ಞೆಯಂತೆ ಹರಿದಾಸ ಪರಂಪರೆಯನ್ನು ವಿಸ್ತರಿಸಲು ಸಂಕಲ್ಪ ತೊಟ್ಟ ಶ್ರೀತಂದೆ ಮುದ್ದುಮೋಹನದಾಸರು ಅಲ್ಲಲ್ಲಿ ಚದುರಿ ಹೋಗಿರುವ ಸುಜೀವಿಗಳೆಂಬ ಅನರ್ಘ್ಯ ರತ್ನಗಳನ್ನು ಹೆಕ್ಕಿ ತೆಗೆಯುವ ಮಹತ್ಕಾರ್ಯದಲ್ಲಿ ನಿರತರಾದರು. ಬೆಂಗಳೂರಿಗೆ ಬಂದ ನಂತರ ದಾಸರ ಕಾರ್ಯ ಕ್ಷೇತ್ರವೂ ವಿಶಾಲವಾಯಿತು. ದಾಸಕೂಟ ಸಭಾ ಕಾರ್ಯದರ್ಶಿಯಾಗಿ ಅನೇಕ ಸ್ಥಳಗಳಿಗೆ ಸಂಚಾರ ಕೈಗೊಂಡಿದ್ದರಿಂದ ಅವರ ಸಂಪರ್ಕವಲಯ ಗಮನಾರ್ಹವಾಗಿ ಹಿಗ್ಗಿದರೆ "ಪರಮಾರ್ಥ ಚಂದ್ರೋದಯ" ಮಾಸಪತ್ರಿಕೆಯ ಸಂಪಾದಕರಾಗಿ ಧಾರ್ಮಿಕ ವಿಚಾರ ಕ್ರಾಂತಿಗೆ ಕಾರಣವಾಗಿದ್ದರಿಂದ ಸಮಾಜದಲ್ಲಿ ವಿಶೇಷ ಜನಜಾಗೃತಿಯೂ ಸಾಧ್ಯವಾಯಿತು. ಹಾಗಾಗಿ ದಾಸಧರ್ಮ ಪ್ರಚಾರಕಾರ್ಯ ವಿವಿಧ ಮುಖಗಳಿಂದ ನಡೆದು ದಾಸರು ಬಹುಬೇಗ ಜನಪ್ರಿಯರಾದರು.

ವಿವಿಧ ಧಾರ್ಮಿಕ ವಿಷಯಗಳ ಬಗ್ಗೆ ದಾಸರು ಮಾಡುತ್ತಿದ್ದ ಪ್ರಚನಗಳನ್ನು ಅಲಿಸಿದ ಸಾವಿರಾರು ಜನರು ಅವರ ವಿಚಾರಧಾರೆಯ ಪ್ರಭಾವಕ್ಕೊಳಗಾಗಿ ಹರಿದಾಸ ಸಾಹಿತ್ಯದಲ್ಲಿ ಶ್ರದ್ಧೆಯನ್ನೂ, ದಾಸಪಂಥದಲ್ಲಿ ಗೌರವವನ್ನೂ ಬೆಳೆಸಿಕೊಂಡರು. ಅನೇಕ ಪುಣ್ಯಜೀವಿಗಳು ದಾಸರ ಬೋಧನೆಯಲ್ಲಿ ತಮ್ಮ ಬಾಳಿನ ಗುರಿಯನ್ನು ಕಂಡುಕೊಂಡು ಅವರ ಶಿಷ್ಯರಾಗಿ ಹರಿದಾಸ ದೀಕ್ಷೆಯನ್ನು ಸ್ವೀಕರಿಸಿದರು.

ಹೀಗೆ ಶಿಷ್ಯರಾದವರಲ್ಲಿ ಶ್ರೀಕೃಷ್ಣರಾಯರೂ ಒಬ್ಬರು. ರೈಲ್ವೆ ಇಲಾಖೆಯಲ್ಲಿ ಕೆಲಸಮಾಡುತ್ತಿದ್ದ ಚಳ್ಳಕೆರೆ ಕೃಷ್ಣರಾಯರು ಆಗ ಬೆಂಗಳೂರಿನಲ್ಲಿ ವಾಸಿಸುತ್ತಿದ್ದರು. ಕೃಷ್ಣರಾಯರ ಅಜ್ಜಿಯವರಾದ ರುಕ್ಮಿಣೀಬಾಯಿ ಮತ್ತು ತಾಯಿಯವರಾದ ವೆಂಕಮ್ಮ ಅವರು ಪರಮಪ್ರಿಯರ ಪ್ರಭಾವಕ್ಕೊಳಗಾಗಿ ಕ್ರಮವಾಗಿ "ಸೀತಾಪತಿ ವಿಠಲ" ಮತ್ತು "ಯಾದವೇಂದ್ರ ವಿಠಲ" ಎಂಬ ಅಂಕಿತೋಪದೇಶ ಪಡೆದಿದ್ದ ಕಾರಣ ಮನೆಯಲ್ಲಿ ಸಮೃದ್ಧವಾದ ಧಾರ್ಮಿಕ ವಾತಾವರಣವಿತ್ತು. ದಾಸಕೂಟದ ಭಜನೆ, ಏಕಾದಶಿ ಜಾಗರಣೆ, ಪುರಾಣ ಪುಣ್ಯಕೀರ್ತನೆಗಳು ಅವರ ಮನೆಯಲ್ಲಿ ನಿರಂತರವಾಗಿ ನಡೆಯುತ್ತಿದ್ದವು. ಇದರಿಂದ ಚಿಕ್ಕ ವಯಸ್ಸಿನಲ್ಲಿಯೇ ಕೃಷ್ಣರಾಯರ ಮನಸ್ಸು ಧಾರ್ಮಿಕ ಸಂಸ್ಕಾರಕ್ಕೊಳಪಟ್ಟು ಹರಿದಾಸ ಸಾಹಿತ್ಯದಲ್ಲಿ ಶ್ರದ್ಧಾ ಭಕ್ತಿಗಳನ್ನು ಬೆಳೆಸಿಕೊಳ್ಳಲು ಕಾರಣವಾಗಿದ್ದವು. ಇದಲ್ಲದೆ ಕೃಷ್ಣರಾಯರ ಅಕ್ಕನವರಾದ ಅಂಬಾಬಾಯಿಯವರು ಸಹ ದಾಸರ ಶಿಷ್ಯತ್ವ ವಹಿಸಿ ಅವರಿಂದ ಅನುಗ್ರಹಪೂರ್ವಕ "ಗೋಪಾಲಕೃಷ್ಣ ವಿಠಲ" ಎಂಬ ಮುದ್ರಿಕೆಯನ್ನು ಪಡೆದುಕೊಂಡಿದ್ದರು. ಚಿಕ್ಕವಯಸ್ಸಿನಲ್ಲಿಯೇ ವಿಧವೆಯಾಗಿದ್ದ ಅಂಬಾಬಾಯಿಯವರು ಅಂಕಿತೋಪದೇಶದ ನಂತರ ತಮ್ಮ ಬಾಳುವೆಯನ್ನು ಹರಿದಾಸ ಸಾಹಿತ್ಯ ಸೇವೆಗೆ ಮುಡಿಪಿಟ್ಟು ನೂರಾರು ಕೀರ್ತನೆಗಳನ್ನು ಗೋಪಾಲಕೃಷ್ಣಾಂಕಿತದಲ್ಲಿ ರಚಿಸಿದರು. ಅಂಬಾಬಾಯಿಯವರು ರಚಿಸಿರುವ ಒಂದೊಂದು ಕೀರ್ತನೆಯೂ ಅಪೂರ್ವವಾಗಿದ್ದು ಹರಿದಾಸ ಹೃದಯ ಕೂಡಿಟ್ಟುಕೊಳ್ಳುವಂತಿದೆ. ತಿರುಪತಿ ಶ್ರೀನಿವಾಸದೇವರನ್ನು ಕುರಿತು ಅವರು ರಚಿಸಿರುವ "ಮೂರು ನಾಮಗಳ ಧರಿಸಿದ ಕಾರಣವೇನು" ಎಂಬ ಕೀರ್ತನೆ ತನ್ನ ಸರಸ ಶೈಲಿ ಹಾಗೂ ಅರ್ಥವಂತಿಕೆಗಳಿಂದ ದಾಸಸಾಹಿತ್ಯದಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದೆ.

"ಪರಮಾರ್ಥ ಚಂದ್ರೋದಯ" ಪತ್ರಿಕೆಯನ್ನು ಕೊಡಲು ಆಗಾಗ ತಮ್ಮ ಮನೆಗೆ ಬರುತ್ತಿದ್ದ ದಾಸರ ಪರಿಚಯ ಶ್ರೀಕೃಷ್ಣರಾಯರಿಗೆ ತಮ್ಮ ಅಜ್ಜಿ ಮತ್ತು ಅಕ್ಕನವರ ಮುಖಾಂತರವೇ ಆಯಿತು. ದಾಸರ ತೇಜೋಮಯ ವ್ಯಕ್ತಿತ್ವ, ವಿದ್ಯಾಪ್ರೌಢಿಮೆ, ವಾತ್ಸಲ್ಯಕರವಾದ ವಾಣಿ ಮುಂತಾದವುಗಳು ರಾಯರನ್ನು ಸೆರೆಹಿಡಿದವು. ದಾಸರ ನಡೆ-ನುಡಿಗಳಲ್ಲಿದ್ದ ಸಾಮ್ಯವನ್ನು ಕಂಡು ಇಂತಹ ಮಹಾತ್ಮರಿಂದ ಅಂಕಿತೋಪದೇಶವನ್ನು ಪಡೆದು ಹರಿದಾಸನಾಗಬೇಕೆಂಬ ಹಂಬಲವುಂಟಾಯಿತು. ಒಮ್ಮೆ ಏಕಾಂತದಲ್ಲಿ ತಂದೆ ಮುದ್ದುಮೋಹನ ದಾಸರಲ್ಲಿ ತಮ್ಮ ಅಂತರಂಗವನ್ನು ನಿವೇದಿಸಿಕೊಂಡು ಅಂಕಿತೋಪದೇಶಕ್ಕಾಗಿ ರಾಯರು ಪ್ರಾರ್ಥನೆ ಸಲ್ಲಿಸಿದರು. ಕೃಷ್ಣರಾಯರು ಸುಜೀವಿಯೆಂಬುದನ್ನು ಮನಗಂಡು ದಾಸರು ಅವರ ಪ್ರಾರ್ಥನೆಯನ್ನು ಮನ್ನಿಸಿ 1928ರಲ್ಲಿ ಅವರಿಗೆ "ರಮಾಕಾಂತ ವಿಠಲ" ಎಂಬ ಅಂಕಿತವನ್ನಿತ್ತು ಪರಮಾನುಗ್ರಹ ಮಾಡಿದರು. ಆ ಸಂದರ್ಭದಲ್ಲಿಯೇ ಕೃಷ್ಣರಾಯರ ಧರ್ಮಪತ್ನಿಯವರಾದ ಸುಂದರಮ್ಮನವರಿಗೂ ಸಹ "ಸುರೇಶ ವಿಠಲ" ಎಂಬ ಅಂಕಿತೋಪದೇಶ ನೀಡಿ ಆಶೀರ್ವದಿಸಿದರು. ಪ್ರತಿಭಾನ್ವಿತರಾದ ಶ್ರೀರಮಾಕಾಂತ ದಾಸರು ಗುರುವನುಗ್ರಹಬಲದಿಂದ ಅನೇಕ ಕೀರ್ತನೆಗಳನ್ನು ರಚಿಸಿದರಲ್ಲದೆ "ಹರಿದಾಸ ದರ್ಪಣ" ಎಂಬ ಉತ್ಕೃಷ್ಟ ಕಾವ್ಯವನ್ನು ಭಾಮಿನಿ ಷಟ್ಪದಿಯಲ್ಲಿ ಬರೆದು ಅಂಕಿತ ನೀಡಿದ ತಮ್ಮ ಗುರುಗಳ ಅಡಿದಾವರೆಗಳಲ್ಲಿ ಅರ್ಪಿಸಿದರು. 'ಪರಮಪ್ರಿಯ' ತಂದೆ ಮುದ್ದುಮೋಹನದಾಸರು ಈ ಕೃತಿಯನ್ನು ಓದಿ ತುಂಬಾ ಸಂತೋಷಪಟ್ಟು ತಾವು ಹೊರತುರುತ್ತಿದ್ದ "ಪರಮಾರ್ಥ ಚಂದ್ರೋದಯ" ಪತ್ರಿಕೆಯಲ್ಲಿ ಅದನ್ನು ಪ್ರಕಟಿಸಿ ಪ್ರೋತ್ಸಾಹಿಸಿದರು.

ತಿರುಪತಿ ಶ್ರೀನಿವಾಸನ ಏಕಾಂತ ಭಕ್ತೆಯಾದ ಆರಣಿ ಸೀತಾಬಾಯಿ ಎಂಬುವವರೂ ಸಹ ದಾಸರಾಯರಿಂದ ಅನುಗ್ರಹೀತರಾಗಿ ಅವರಿಂದ "ಶರ್ವಾದಿವಂದ್ಯ ವಿಠಲ" ಎಂಬ ಅಂಕಿತವನ್ನು ಪಡೆದುಕೊಂಡರು. ಕಡಪಾಜಿಲ್ಲಾ ಸಿದ್ಧವಟ್ಟಂ ಎಂಬ ಗ್ರಾಮದ ನಿವಾಸಿಯಾಗಿದ್ದ ಸೀತಾಬಾಯಿ ಯವರಿಗೆ ದಾಸರಾಯರಿಂದ ಅಂಕಿತೋಪದೇಶವಾದ ಮೇಲೆ ಅಪೂರ್ವ ಸಿದ್ಧಿ ಪ್ರಾಪ್ತವಾಯಿತು. ಇದೇ ಮಾದರಿಯಲ್ಲಿ ನಾಟಕ ಶಿರೋಮಣಿ ವರದಾ ಚಾರ್ಯರ ನಾಟಕ ತಂಡದಲ್ಲಿ ಪ್ರಸಿದ್ಧ ಹಾರ್ಮೋನಿಯಂ ವಾದಕರಾಗಿದ್ದ

ಹಾರ್ಮೋನಿಯಂ ಕೆ. ಶೇಷಗಿರಿರಾವ್ ಎಂಬುವರು ಸಹ ತಮ್ಮ ಕುಟುಂಬ ಸಮೇತ ದಾಸರ ಶಿಷ್ಯತ್ವವನ್ನು ಸ್ವೀಕರಿಸಿ ಅವರಿಂದ "ರಘುರಾಮ ವಿಠಲ" ಎಂಬ ಅಂಕಿತವನ್ನು ಪಡೆದುಕೊಂಡರು. ಅವರ ಧರ್ಮಪತ್ನಿಯಾದ ಶ್ರೀಮತಿ ಸೀತಮ್ಮನವರಿಗೆ ಪರಮಪ್ರಿಯರು "ಇಂದಿರೇಶ ವಿಠಲ" ಎಂಬ ಅಂಕಿತವನ್ನು ಕರುಣಿಸಿದರು. ದಾಸರಾಯರಿಂದ ಅಂಕಿತದೀಕ್ಷೆ ಪಡೆದ ಹಾರ್ಮೋನಿಯಂ ಶೇಷಗಿರಿರಾಯರು "ರಘುರಾಮ ವಿಠಲ" ಎಂಬ ಅಂಕಿತದಲ್ಲಿ ಹಲವಾರು ಕೃತಿಕೀರ್ತನೆಗಳನ್ನು ರಚಿಸಿರುತ್ತಾರೆ.

ದಾಸರು ಅರಸೀಕೆರೆಗೆ ಬಂದಿದ್ದಾಗ ಅವರ ಶಿಷ್ಯರಾದ ಸಿ. ಕೃಷ್ಣರಾಯರ ಸಮೀಪ ಬಂಧುಗಳಾದ ಎಸ್.ವಿ. ಹರಿದಾಸ್ ಎಂಬುವರಿಗೆ "ನಿತ್ಯಾನಂದ ವಿಠಲ" ಎಂಬ ಅಂಕಿತವನ್ನೂ ಅವರ ಧರ್ಮಪತ್ನಿಗೆ "ಪರಮಾನಂದ ವಿಠಲ" ಎಂಬ ಅಂಕಿತವನ್ನೂ ಇತ್ತು ಆಶೀರ್ವದಿಸಿದರು. ಇದೇ ಸಂದರ್ಭದಲ್ಲಿಯೇ ಅರಸೀಕೆರೆಯ ಡಿ. ರಾಜಾರಾವ್ ಅವರಿಗೆ "ಸುರೇಂದ್ರವಿಠಲ" ಮತ್ತು ಅವರ ಬಂಧುಗಳಾದ ಸಿ.ವಿ. ಬಾಬುರಾವ್ ಅವರಿಗೆ "ಸೀತಾರಾಮ ವಿಠಲ" ಎಂಬುದಾಗಿ ಅಂಕಿತೋಪದೇಶ ಮಾಡಿ ಹರಿಸಿದರು.

ಚಿತ್ರದುರ್ಗದಲ್ಲಿ ಪ್ರವಾಸ ಮಾಡುತ್ತಿದ್ದಾಗ ದಾಸರಿಗೆ ಮತ್ತೊಂದು ಅಮೂಲ್ಯ ಶಿಷ್ಯರತ್ನ ಲಭ್ಯವಾಯಿತು. ಚಿತ್ರದುರ್ಗದ ಶಾಲಾ ಉಪಾಧ್ಯಾಯ ರಾಗಿದ್ದ ಮಳವಳ್ಳಿ ಶ್ರೀನಿವಾಸರಾಯರೆಂಬುವರೇ ಆ ಶಿಷ್ಯರತ್ನ, "ಶ್ರೀವೆಂಕಟೇಶ" ಎಂಬ ಮುದ್ರಿಕೆಯಿಂದ ಭಕ್ತರಸಭರಿತವಾದ ನೂರಾರು ಪದಪದ್ಯಗಳನ್ನು ರಚಿಸಿದ್ದ ಶ್ರೀನಿವಾಸರಾಯರಿಗೆ "ನೀತ ಗುರುಗಳಿಂದ ಅಂಕಿತೋಪದೇಶವಾಗಲಿಲ್ಲ" ಎಂಬ ಕೊರಗಿತ್ತು. ಆ ಕೊರಗನ್ನೇ ರಾಯರು ತಮ್ಮ ಒಂದು ಕೀರ್ತನೆಯಲ್ಲಿಯೂ ಸಹ ವ್ಯಕ್ತಪಡಿಸಿ, ನೀತಗುರುಗಳನ್ನು ಕರುಣಿಸುವಂತೆ ತಮ್ಮ ಇಷ್ಟದೈವವನ್ನು ಪ್ರಾರ್ಥಿಸಿದ್ದರು. ಹೀಗೆ ನೀತ ಗುರುವಿನ ದರ್ಶನಕ್ಕಾಗಿ ಹಂಬಲಿಸುತ್ತಿದ್ದ ಶ್ರೀನಿವಾಸರಾಯರನ್ನು ಹುಡುಕಿಕೊಂಡು 'ಕರುವನ್ನರಸಿ ಹಸುವು ಬರುವಂತೆ' ತಂದೆ ಮುದ್ದುಮೋಹನದಾಸರೇ ದಯಮಾಡಿಸಿದರು. ಅಂಕಿತೋಪದೇಶಕ್ಕಾಗಿ ಪರಿತಪಿಸುತ್ತಿರುವ ಶ್ರೀನಿವಾಸ ರಾಯರ ಕೀರ್ತನೆಗಳ ಪದಪಂಕ್ತಿಗಳನ್ನು ಸ್ಪಷ್ಟವಾಗಿ ಉಲ್ಲೇಖಿಸಿ 'ನಿನಗೆ ಅಂಕಿತ ನೀಡಲೆಂದೇ ನಾವು ಬಂದಿದ್ದೇವೆ' ಎಂದು ದಾಸರು ಹೇಳಿದಾಗ ರಾಯರಿಗೆ

ಆಶ್ಚರ್ಯವಾಯಿತು. ಗುಪ್ತವಾಗಿ ತಮ್ಮ ಮನೆದೇವರಲ್ಲಿ ಮಾಡಿಕೊಂಡ ಅಂತರಂಗದ ಅಪೇಕ್ಷೆಯನ್ನು ಅರಿತ ದಾಸರು ಅಪರೋಕ್ಷ ಜ್ಞಾನಿಗಳೆಂದು ಮನದಟ್ಟಾಯಿತು. ದಾಸರು ವಿಜಯದಾಸರ ಪಾವನ ಪರಂಪರೆಯಲ್ಲಿ ಬಂದವರೆಂದು ತಿಳಿದ ಮೇಲಂತೂ ಅವರ ಶಂಕೆ ಪೂರ್ಣ ನಿವೃತ್ತಿಯಾಯಿತು ರಾಯರು ದಾಸರಿಗೆ ಸಂಪೂರ್ಣ ಶರಣಾದರು. ರಾಯರ ಯೋಗ್ಯತೆಯನ್ನರಿತಿದ್ದ ದಾಸರು ಅವರಿಗೆ "ಉರಗಾದ್ರಿವಾಸ ವಿಠಲ" ಎಂಬ ಅಂಕಿತವನ್ನು ನೀಡಿ ಪರಮಾನುಗ್ರಹ ಮಾಡಿದರು. ಮುಂದೆ ಉರಗಾದ್ರಿವಾಸ ವಿಠಲದಾಸರೂ ಸಹ ತಮ್ಮ ಗುರುಗಳಂತೆಯೇ ದಾಸ ಪರಂಪರೆಯನ್ನು ಬೆಳೆಸಿದರು. ಚಿತ್ರದುರ್ಗದಲ್ಲಿ "ಪರಮಪ್ರಿಯ ದಾಸ ಮಂಡಲಿ"ಯನ್ನು ಸ್ಥಾಪಿಸಿ ನೂರಾರು ಸುಜೀವಿಗಳನ್ನು ಸಂಘಟಿಸಿದರು. ಸಾಧನ ಮಾರ್ಗದಲ್ಲಿ ಮುನ್ನಡೆದು ಗುರುಬಿಂಬ ತಮ್ಮಲ್ಲಿ ಒಂದಂಶದಿಂದ ಇರುವುದನ್ನು ತೋರಿಸಿಕೊಟ್ಟರು. ಪ್ರೌಢಶೈಲಿಯ, ಗಹನ ತತ್ವಗಳುಳ್ಳ ನೂರಾರು ಕೀರ್ತನೆಗಳನ್ನು ರಚಿಸಿದರು. ಸಂಸಾರದಲ್ಲಿದ್ದರೂ ಸಂಸಾರ ಪಾಶಕ್ಕೆ ಸಿಲುಕದೆ, ಕೆಸರಿನಲ್ಲಿ ಅರಳಿದ ತಾವರೆಯ ಹಾಗೆ, ತೊಟ್ಟು ಕಳಚಿದ ಹಣ್ಣಿನಂತೆ ಪರಿಪಕ್ವ ಸ್ಥಿತಿಯನ್ನು ತಲುಪಿ ಕಲಿಯುಗದಲ್ಲಿ ಹರಿದಾಸರು ಹೇಗಿರಬೇಕೆಂಬುದನ್ನು ತಮ್ಮ ಜೀವಿತದ ಮೂಲಕ ತೋರಿಸಿಕೊಟ್ಟರು. ಅನುಗ್ರಹಾಕಾಂಕ್ಷಿಗಳಾಗಿ ಬಂದ ಅನೇಕ ಸುಜೀವಿಗಳಿಗೆ ಅಂಕಿತೋಪದೇಶ ನೀಡಿ ಹರಿಯ ಕಿಂಕರರನ್ನಾಗಿ ಮಾಡಿ ಕ್ರಿ.ಶ. 1964ರ ಕಾರ್ತಿಕ ಬಹುಳ ದ್ವಾದಶಿಯಂದು ಶ್ರೀಉರಗಾದ್ರಿವಾಸ ವಿಠಲದಾಸರು ಹರಿಪುರವನ್ನು ಸೇರಿದರು. ಉರಗಾದ್ರಿವಾಸ ವಿಠಲದಾಸರ ಅನುಯಾಯಿಗಳಲ್ಲಿ ತಂದೆ ವೆಂಕಟೇಶ ವಿಠಲಾಂಕಿತ ಚಿತ್ರದುರ್ಗದ ಶ್ರೀ ಆರ್. ರಾಮಚಂದ್ರರಾಯರು ಸುಪ್ರಸಿದ್ಧರು.

ಆಗ ಹರಿಹರದಲ್ಲಿದ್ದ ಶ್ರೀರಮಾಕಾಂತದಾಸರ ಆಹ್ವಾನದಂತೆ ತಂದೆ ಮುದ್ದುಮೋಹನ ದಾಸರು ಹರಿಹರಕ್ಕೆ ಬಂದಿದ್ದಾಗ ರಾಣಿಬೆನ್ನೂರಿನ ಶ್ರೀಚಂದಿ ಹಯವದನಾಚಾರ್ಯ ಎಂಬುವವರು ದಾಸರ ಶಿಷ್ಯರಾದರು. ಪಾಂಡುರಂಗೀ ಮನೆತನದವರಾದ ಶ್ರೀಚಂದಿ ಹಯವದನಾಚಾರ್ಯರು ಮಧ್ವಶಾಸ್ತ್ರ ಸಂಪನ್ನರು. ಶ್ರೀರಾಘವೇಂದ್ರಸ್ವಾಮಿಗಳ ಪರಮ ಭಕ್ತರು. ರಾಣಿಬೆನ್ನೂರಿನ ಶ್ರೀರಾಘವೇಂದ್ರ ಸ್ವಾಮಿಗಳ ಮಠದಲ್ಲಿ ಪ್ರತಿನಿತ್ಯ ಅತೀವ ಶ್ರದ್ಧಾಭಕ್ತಿಗಳಿಂದ

ಗುರುರಾಜರ ಬೃಂದಾವನದ ಪೂಜಾ ಕೈಂಕರ್ಯಗಳನ್ನು ನಡೆಸುತ್ತಿದ್ದರು. ಬಾಲ್ಯದಲ್ಲಿ ತಿರುಪತಿಯ ಶ್ರೀಪಾಂಡುರಂಗೀ ಹುಚ್ಚಾಚಾರ್ಯರ ಬಳಿ ಶಾಸ್ತ್ರಾಧ್ಯಯನ ಮಾಡಿ ಅವರ ಕೃಪೆಗೆ ಪಾತ್ರರಾಗಿದ್ದರು. ತಂದೆ ಮುದ್ದು ಮೋಹನದಾಸರು ಹರಿಹರಕ್ಕೆ ಬಂದಿರವ ವಿಷಯ ಮಿತ್ರರಾದ ಶ್ರೀರಮಾಕಾಂತದಾಸರ ಮೂಲಕ ತಿಳಿದಕೂಡಲೇ ಆಚಾರ್ಯರು ರಾಣಿಬೆನ್ನೂರಿನಿಂದ ಉಪೋಷ್ಯದಲ್ಲಿಯೇ ಪಾದಚಾರಿಗಳಾಗಿ ಹರಿಹರಕ್ಕೆ ಬಂದು ದಾಸರಾಯರ ದರ್ಶನ ಪಡೆದರು. ಸೂರ್ಯೋದಯಕ್ಕೆ ಸರಿಯಾಗಿ ಹರಿಹರ ತಲುಪಿ ಮಿತ್ರರ ಮನೆಗೆ ಬಂದ ಅವರಿಗೆ ಆಶ್ಚರ್ಯ ಕಾದಿತ್ತು. ಆಚಾರ್ಯರು ಇನ್ನು ಹೊರಬಾಗಿಲಿನ ಹೊಸ್ತಿಲು ಪ್ರವೇಶಿಸಿಲ್ಲ ಆಗಲೇ ಒಳಗಿದ್ದ ತಂದೆ ಮುದ್ದುಮೋಹನದಾಸರು ಇವರ ಆಗಮನವನ್ನು ಪೂರ್ವಭಾವಿಯಾಗಿ ತಿಳಿದವರಂತೆ, ಎಷ್ಟೋ ದಿವಸಗಳ ಪರಿಚಯವಿರುವಂತೆ ನಗುಮುಖದಿಂದ "ಬಂದೆಯಾಪ್ಪ ಬಾ" ಎಂದು ಪ್ರೀತಿಪೂರ್ವಕವಾಗಿ ಸ್ವಾಗತಿಸಿದ್ದನ್ನು ಕಂಡು ಆಚಾರ್ಯರ ಹೃದಯ ತುಂಬಿಬಂದಿತು. ಆಚಾರ್ಯರು ಕಂಬನಿದುಂಬಿ, ದಿಂಡುರುಳಿದ ಬಾಳೆಯಂತೆ ದಾಸರ ಪಾದಗಳಿಗೆರಗಿ ಅಂಕಿತವನ್ನು ನೀಡಿ ಉದ್ಧರಿಸಬೇಕೆಂದು ಪರಿಪರಿಯಾಗಿ ಪ್ರಾರ್ಥಿಸಿದರು. ಜ್ಞಾನಿಗಳಾದ ದಾಸರು ವಾತ್ಸಲ್ಯದಿಂದ ಆಚಾರ್ಯರ ಮೈದಡವಿ ಎಬ್ಬಿಸಿ ಅಭಯವಿತ್ತರಲ್ಲದೆ "ಮಧ್ವಾಂತರ್ಗತ ವಿಠಲ" ಎಂಬ ಅಂಕಿತವನ್ನೂ ನೀಡಿ ಮಹದನುಗ್ರಹಮಾಡಿದರು. ಅಂದಿನಿಂದ ಹಯವದನಾಚಾರ್ಯರು ಹರಿದಾಸ ಪರಂಪರೆಯನ್ನು ಸೇರಿ ಮಧ್ವಾಂತರ್ಗತ ವಿಠಲದಾಸರಾದರು.

ಅಂಕಿತೋಪದೇಶವಾದ ಮರುದಿವಸ ಆಚಾರ್ಯರು ತಮ್ಮ ಸ್ಥಳವಾದ ರಾಣಿಬೆನ್ನೂರಿಗೆ ಹಿಂದಿರುಗಲು ಗುರುಗಳ ಅಪ್ಪಣೆ ಬೇಡಿದರು. ಆಗ ದಾಸರು ಅವರಿಗೆ ಊರಿಗೆ ಹೊರಡಲು ಅಪ್ಪಣೆ ನೀಡುತ್ತಾ ಆಚಾರ್ಯರ ಪ್ರಾರ್ಥನೆಯಂತೆ ತಮ್ಮ ಭಾವಚಿತ್ರದ ಪ್ರತಿಯೊಂದನ್ನೂ ದಯಪಾಲಿಸಿದರು. ಇದನ್ನು ನಿನ್ನು ಬಳಿಯಲ್ಲಿ ಇಟ್ಟುಕೊಂಡಿರು ಸಮಯಕ್ಕೆ ಒದಗುತ್ತದೆ ಎಂದಷ್ಟೇ ಹೇಳಿ ಶಿಷ್ಯರನ್ನು ಆಶೀರ್ವದಿಸಿ ಬೀಳ್ಕೊಟ್ಟರು. ಆಚಾರ್ಯರು ಗುರುಗಳು ಕೃಪೆಯಿಂದ ನೀಡಿದ ಅವರ ಭಾವಚಿತ್ರವನ್ನು ಪರಮಭಕ್ತಿಯಿಂದ ಸ್ವೀಕರಿಸಿ ಊರಿಗೆ ಪ್ರಯಾಣ ಮಾಡಿದರು.

ಆ ಕಾಲದಲ್ಲಿ ಈಗಿನಂತೆ ಸಮರ್ಪಕವಾದ ವಾಹನ ಸೌಲಭ್ಯಗಳಿಲ್ಲದಿದ್ದುದ್ದರಿಂದ ಆಚಾರ್ಯರು ರಾಣಿಬೆನ್ನೂರಿಗೆ ನಡೆದುಕೊಂಡೇ ಹೊರಟರು. ದಟ್ಟವಾದ ಅರಣ್ಯ ಮಧ್ಯದಲ್ಲಿ ಆಚಾರ್ಯರು ಏಕಾಂಗಿಯಾಗಿ ನಡೆದುಕೊಂಡು ಹೋಗುತ್ತಿದ್ದಾಗ ವಿಸ್ಮಯಕರವಾದ ಘಟನೆಯೊಂದು ನಡೆಯಿತು. ಆಚಾರ್ಯರು ತಮ್ಮ ಎಡಗಡೆಯಿಂದ ಚಿರತೆಯೊಂದು ರೋಷದಿಂದ ಬರುತ್ತಿರುವುದನ್ನೂ, ಬಲಭಾಗದಿಂದ ಕಾಡುಹಂದಿಯೊಂದು ತಮ್ಮ ಕಡೆಗೇ ಓಡುತ್ತಾ ಬರುತ್ತಿರುವುದನ್ನೂ ಕಂಡರು. ಆಚಾರ್ಯರು ಭೀತಿಯಿಂದ ಕಂಪಿಸತೊಡಗಿದರು. ಒಂದು ಕ್ಷಣ ಅವರಿಗೆ ಹೃದಯ ಕ್ರಿಯೆಯೇ ನಿಂತತಾಯ್ತು. ಮರುಕ್ಷಣದಲ್ಲಿಯೇ ಚೇತರಿಸಿಕೊಂಡ ಆಚಾರ್ಯರಿಗೆ ಪುಣ್ಯವಶಾತ್ ಗುರುಗಳ ಭಾವಚಿತ್ರ ತಮ್ಮ ಬಳಿಯಿರುವ ನೆನಪಾಗಿ ಸ್ವಲ್ಪ ಧೈರ್ಯವುಂಟಾಯಿತು. ಆಚಾರ್ಯರು ಗಟ್ಟಿಯಾಗಿ ತಮ್ಮ ಎರಡು ಕಣ್ಣುಗಳನ್ನೂ ಮುಚ್ಚಿ ಗುರುಧ್ಯಾನ ಮಾಡತೊಡಗಿದರು. ಹೀಗೆ ಒಂದು ಕ್ಷಣ ಕಳೆದಿರಬೇಕು. ಆಗ ಆಚಾರ್ಯರಿಗೆ ಎದೆಯೊಡೆಯುವಂತಹ ಗುಂಡಿನ ಶಬ್ದ ಎರಡು ಬಾರಿ ಕೇಳಿಸಿತು. ಆಚಾರ್ಯರು ಕಣ್ಣುತೆರೆದು ನೋಡಿದರು. ಅಕ್ಕಪಕ್ಕದಲ್ಲಿ ಚಿರತೆಯಾಗಲೀ, ಕಾಡುಹಂದಿಯಾಗಲೀ ಕಾಣಿಸಲಿಲ್ಲ. ಆದರೆ ಏನಾಶ್ಚರ್ಯ! ಎದುರಿಗೆ ತಮ್ಮ ಗುರುಗಳಾದ ತಂದೆ ಮುದ್ದುಮೋಹನದಾಸರು ಅನುಗ್ರಹದ ನಗು ಬೀರುತ್ತಾ ನಿಂತಿದ್ದಾರೆ. ಇದನ್ನು ಆಚಾರ್ಯರೇ ತಮಗಾದ ಅನುಭವವನ್ನು ಗುರುಗಳಿಗೆ ಬರೆದ ಪತ್ರದಲ್ಲಿ ವಿಸ್ತಾರವಾಗಿ ವರ್ಣಿಸಿದ್ದಾರೆ.

ಮಧ್ವಾಂತರ್ಗತ ವಿಠಲದಾಸರು ತಂದೆ ಮುದ್ದುಮೋಹನದಾಸರ ಪರಮಾನುಗ್ರಹಕ್ಕೆ ಪಾತ್ರರಾದರು. ಹರಿದಾಸ ದೀಕ್ಷೆಯನ್ನು ಕಡು ನಿಷ್ಠೆಯಿಂದ ಪಾಲಿಸಿ ದಾಸ ಪರಂಪರೆಯನ್ನು ಮುಂದುವರೆಸಿದರು. ಗುರುವನುಗ್ರಹದಿಂದ ಅರ್ಥಪೂರ್ಣವಾದ ಅನೇಕ ಕೀರ್ತನೆಗಳನ್ನು ರಚಿಸಿದರು. ಕೆಲವು ಸಮಯದ ನಂತರ ವೈರಾಗ್ಯ ಶಿಖಾಮಣಿಗಳಾಗಿ ಹರಿವಾಯುಗುರುಗಳ ಪ್ರೇರಣೆಯಂತೆ ಶ್ರೀಕೂಡಲೀ ಅಕ್ಷೋಭ್ಯತೀರ್ಥ ಮಠದ ಶ್ರೀಗಳವರಿಂದ ಸನ್ಯಾಸಾಶ್ರಮ ಸ್ವೀಕರಿಸಿ "ಹೃಷೀಕೇಶ ತೀರ್ಥರು" ಎಂಬ ನಾಮಧೇಯದಿಂದ ಪ್ರಖ್ಯಾತರಾದರು. ಮಹತ್ಸಾಧನೆಯನ್ನು ಮಾಡಿಕೊಂಡು ಅನೇಕ ಸುಜೀವಿಗಳನ್ನು ಉದ್ಧರಿಸಿ ಶ್ರೀಹೃಷೀಕೇಶತೀರ್ಥರು ಕ್ರಿ.ಶ. 1961ರಲ್ಲಿ ನಾರಾಯಣ ಸ್ಮರಣ ಪೂರ್ವಕ

ಬೃಂದಾವನಸ್ಥರಾದರು. ಈಗಲೂ ಅವರ ಬೃಂದಾವನವನ್ನು ರಾಣಿಬೆನ್ನೂರಿನಲ್ಲಿ ನೋಡಬಹುದು.

## ಪತಿತೋದ್ಧಾರಕ

ತಿಳಿಯದೆ ತಪ್ಪು ಮಾಡಿ, ತಿಳಿದ ನಂತರ ಮಾಡಿದ ತಪ್ಪಿಗಾಗಿ ಪಶ್ಚಾತ್ತಾಪ ಪಟ್ಟು ಪರಿತಪಿಸುವ ಜೀವಿಗಳನ್ನು ಉದ್ಧರಿಸುವುದು ದೇವಸ್ವಭಾವಿಗಳ ಲಕ್ಷಣ. ತಂದೆ ಮುದ್ದುಮೋಹನದಾಸರು ಅಂತಹ ದೇವಸ್ವಭಾವಿಗಳು. ಎಂತಹ ಅಪರಾಧ ಮಾಡಿದ್ದರೂ ಸರಿಯೇ ಮಾಡಿದ ಅಪರಾಧವನ್ನು ಪ್ರಾಮಾಣಿಕವಾಗಿ ಒಪ್ಪಿಕೊಂಡು ಶರಣಾಗತರಾಗುವವರಿಗೆ ಹಿಂದು ಮುಂದು ನೋಡದೆ ಅಭಯವನೀಡುವ ದಯಾಮಯ ಹೃದಯವುಳ್ಳವರು. ಹೃದ್ರಾವಕವಾದ ಇಂತಹ ಕರುಣೆಯ ಕಥೆಗಳಲ್ಲಿ ಪ್ರಖ್ಯಾತ ಪಂಡಿತರಾಗಿದ್ದ ಶ್ರೀಪಲ್ಲಡಂ ಮಾಧವಾಚಾರ್ಯ ಮತ್ತು ಪ್ರೊದಟೂರಿನ ಸುಪ್ರಸಿದ್ಧ ವಕೀಲವಾಗಿದ್ದ ಶ್ರೀಹಯವದನರಾಯರ ದೃಷ್ಟಾಂತಗಳನ್ನು ಉದಾಹರಿಸಬಹುದು.

ಮಧ್ವಶಾಸ್ತ್ರ ಸಂಪನ್ನರಾದ ಶ್ರೀಪಲ್ಲಡಂ ಮಾಧವಾಚಾರ್ಯ ಎಂಬುವರು ತಮಿಳುನಾಡಿನ ಕೊಯಮತ್ತೂರು ಜಿಲ್ಲೆಗೆ ಸೇರಿದ ಪಲ್ಲಡಂ ಎಂಬ ಗ್ರಾಮದವರು. ಭಾರತ, ಭಾಗವತ, ಸುಧಾದಿ ಗ್ರಂಥಗಳಲ್ಲಿ ಆಚಾರ್ಯರಿಗೆ ಅಪೂರ್ವ ಪಾಂಡಿತ್ಯವಿತ್ತು. ಉತ್ತಮ ವಾಗ್ಮಿಗಳೂ ಆಗಿದ್ದ ಆಚಾರ್ಯರು ಆಗ ಉತ್ತರಾದಿಮಠಾಧೀಶರಾಗಿದ್ದ ಶ್ರೀಸತ್ಯಧ್ಯಾನತೀರ್ಥರ ಮೆಚ್ಚುಗೆಗೂ ಪಾತ್ರರಾಗಿದ್ದರು. ಒಮ್ಮೆ ಯಾವುದೋ ಗೃಹಕಲಹದಿಂದ ಬೇಸರಗೊಂಡ ಆಚಾರ್ಯರು ಆತುರಪಟ್ಟು ಸನ್ಯಾಸಾಶ್ರಮ ಸ್ವೀಕರಿಸಿಬಿಟ್ಟರು. ಸ್ವಲ್ಪ ಸಮಯ ಸನ್ಯಾಸಿಗಳಾಗಿದ್ದ ನಂತರ ಆಚಾರ್ಯರ ಮನಸ್ಸು ತಿಳಿಯಾಯಿತು. ಆಗ ಅವರಿಗೆ ತಮ್ಮ ದುಡುಕಿನ ಅರಿವಾಯಿತು. ನಿಜವಾದ ವೈರಾಗ್ಯವಿಲ್ಲದೆ ಸನ್ಯಾಸಿಗಳಾಗಿರುವುದು ತಪ್ಪು ಎಂದು ತಿಳಿದು ಆಚಾರ್ಯರು ಮತ್ತೆ ಗೃಹಸ್ಥಾಶ್ರಮಕ್ಕೆ ಬಂದುಬಿಟ್ಟರು.

ಸನ್ಯಾಸಿಗಳಾಗಿ ಪುನಃ ಗೃಹಸ್ಥರಾದ ಆಚಾರ್ಯರು ಸಮಾಜದ ನಿಂದನೆಗೂ ಗುರಿಯಾದರು. ತಮ್ಮ ಕುಲಗುರುಗಳಾದ ಉತ್ತರಾದಿ ಮಠದ

ಶ್ರೀಸತ್ಯಧ್ಯಾನತೀರ್ಥರಿಂದಲೂ ಬಹಿಷ್ಕೃತಗೊಂಡರು. ಸ್ವತಃ ಶಾಸ್ತ್ರವೇತ್ತರಾದ ಅವರಿಗೆ ತಾವು ಮಾಡಿದ್ದು ಘೋರ ಪಾಪ ಎಂಬ ಅರಿವಿತ್ತು. ಆದರೆ ಆತುರದ ನಿರ್ಧಾರದಿಂದ ತಪ್ಪು ನಡೆದುಹೋಗಿತ್ತು. ಏನು ಮಾಡಬೇಕೆಂದು ತೋರದೆ ಆಚಾರ್ಯರು ಪರಿಪರಿಯಾಗಿ ಪರಿತಪಿಸತೊಡಗಿದರು.

ಮಠದಿಂದ ಬಹಿಷ್ಕೃತರಾಗಿದ್ದ ಕಾರಣ ಅವರಿಗೆ ಪ್ರತಿನಿತ್ಯ ಇರುತ್ತಿದ್ದ ಪುರಾಣ ಪ್ರವಚನಾದಿಗಳ ಅವಕಾಶವೂ ತಪ್ಪಿಹೋಯಿತು. ಅವರ ಬಳಿ ಶಾಸ್ತ್ರವ್ಯಾಸಂಗ ನಿರತರಾಗಿದ್ದ ಶಿಷ್ಯರು ಪಾಠಕ್ಕೆ ಬರುವುದನ್ನು ನಿಲ್ಲಿಸಿದರು. ಕಡೆಗೆ ಬ್ರಾಹ್ಮಣಾರ್ಥಕ್ಕೂ ಅವರನ್ನು ಯಾರೂ ಕರೆಯುತ್ತಿರಲಿಲ್ಲ. ತೀವ್ರ ಮನೋವೇದನೆಯಿಂದ ಆಚಾರ್ಯರು ಬಳಲಿದರು. ಸರಿಯಾದ ಆದಾಯವಿಲ್ಲದೆ ಜೀವನ ಜರುಗುವುದೂ ಸಮಸ್ಯೆಯಾಯಿತು. ಕಡೆಗೆ ನಿರ್ವಾಹವಿಲ್ಲದೆ ಬೆಂಗಳೂರಿನ ಮಲ್ಲೇಶ್ವರದಲ್ಲಿ ಒಂದು ಸಣ್ಣ ಮುದ್ರಣಾಲಯವನ್ನು ತೆರೆದು ಅದರಲ್ಲಿ ಮುದ್ರಣ ಹಾಗೂ ಪುಸ್ತಕಗಳನ್ನು ಬೈಂಡ್ ಮಾಡುವ ವೃತ್ತಿಯನ್ನು ಪ್ರಾರಂಭಿಸಿದರು.

ಹೀಗಿರುವಾಗ ಆಚಾರ್ಯರಿಗೆ ಪರಿಚಿತರಾದ ಮತ್ತು ದಾಸರ ಶಿಷ್ಯರಾದ ಶ್ರೀರಾಮಪುರದ ಶ್ರೀ ಕೆ. ಶೇಷಗಿರಿರಾವ್ ಎಂಬುವವರು ತಂದೆ ಮುದ್ದುಮೋಹನದಾಸರ ಉಪನ್ಯಾಸಗಳನ್ನೆಲ್ಲಾ ಸಂಗ್ರಹಿಸಿ ಅದನ್ನು ಬೈಂಡ್ ಮಾಡಲು ಮಾಧವಾಚಾರ್ಯರ ಮುದ್ರಣಾಲಯಕ್ಕೆ ತಂದು ಕೊಟ್ಟರು. ಆ ಪುಸ್ತಕವನ್ನು ಬೈಂಡ್ ಮಾಡುವಾಗ ಸಹಜವೆಂಬಂತೆ ಆಚಾರ್ಯರ ದೃಷ್ಟಿ ಅದರಲ್ಲಿರುವ ದಾಸರ ಉಪನ್ಯಾಸಗಳ ಮೇಲೆ ಹೋಯಿತು. ಶೇಷಗಿರಿರಾಯರ ಮೂಲಕ ದಾಸರ ಬಗ್ಗೆ ಆಗಾಗ ಕೇಳುತ್ತಿದ್ದರೂ ಆಚಾರ್ಯರಿಗೆ ಅವರ ಮೇಲೆ ಅಂತಹ ಗೌರವ ಭಾವನೆಯೇನೂ ಮೂಡಿರಲಿಲ್ಲ. ಮೇಲಾಗಿ ದಾಸರ ವೇಷ-ಭೂಷಣಗಳೂ ಸಹ ಅವರಿಗೆ ವಿಚಿತ್ರವೆನ್ನಿಸಿ. 'ಪಾಂಡಿತ್ಯದ ಬಲವಿಲ್ಲದವರು ಹೂಡುವ ತಂತ್ರ'ವೆಂಬ ಅವಿಶ್ವಾಸವನ್ನೇ ಹುಟ್ಟಿಸಿತ್ತು. ಆದರೆ ದಾಸರ ಅಸ್ಖಲಿತ ವಿಚಾರಧಾರೆ, ಅದಕ್ಕೆ ಪೂರಕವಾಗಿ ಗಹನವೆನ್ನಿಸುವ ಶಾಸ್ತ್ರ ಪ್ರಮೇಯಗಳ ಸರಮಾಲೆ, ಅಪರಿಮಿತ ಭಗವದ್ಭಕ್ತಿ, ಜಟಿಲವೆನ್ನಿಸುವ ವಿಷಯಗಳನ್ನೂ ಸರಳವಾದ ಸರಸ ಶೈಲಿಯಲ್ಲಿ ಸಾದರ ಪಡಿಸುವ ಜಾಣ್ಮೆ ಮುರುಟಿದ ಮನಸ್ಸುಗಳನ್ನು ಅರಳಿಸುವಂತಹ ಅಮೃತಸದೃಶ ನುಡಿಗಟ್ಟು ಮುಂತಾದವು

ಗಳನ್ನು ಕೂಡಿದ ಅವರ ಉಪನ್ಯಾಸಗಳನ್ನು ಓದುತ್ತಿದ್ದಂತೆ ಆಚಾರ್ಯರಿಗೆ 'ದಾಸರು ಒಬ್ಬ ಅಪೂರ್ವ ಪಂಡಿತರಷ್ಟೇ ಅಲ್ಲ ಪಾಂಡಿತ್ಯಕ್ಕೂ ಮೀರಿದ ಜ್ಞಾನಿವರೇಣ್ಯರು' ಎಂಬುದು ಮನದಟ್ಟಾಯಿತು. ವಿಶಾಲ ಹೃದಯವುಳ್ಳ ಇಂತಹ ಮಹಾನುಭಾವರ ಬಗ್ಗೆ ತಪ್ಪು ಕಲ್ಪನೆ ಹೊಂದಿದ್ದಕ್ಕೆ ಆಚಾರ್ಯರಿಗೆ ತೀವ್ರ ಪಶ್ಚಾತ್ತಾಪವುಂಟಾಗಿ ಅವರ ಕಣ್ಣಾಲಿಗಳು ತುಂಬಿಕೊಂಡವು. ಆಚಾರ್ಯರು ಶೇಷಗಿರಿರಾಯರ ಮೂಲಕ ದಾಸರ ದರ್ಶನ ಪಡೆದು ತಮ್ಮ ಜೀವಿತದಲ್ಲಿ ನಡೆದುಹೋದ ಸಮಸ್ತ ವಿದ್ಯಮಾನಗಳನ್ನೂ ಹೇಳಿಕೊಂಡು ಧಾರೆಧಾರೆಯಾಗಿ ಕಣ್ಣೀರು ಸುರಿಸಿದರು. ತಮ್ಮನ್ನು ಕೃಪೆಯಿಂದ ಅನುಗ್ರಹಿಸಿ ಉದ್ಧರಿಸಬೇಕೆಂದು ಅವರ ಚರಣಗಳನ್ನು ಭದ್ರವಾಗಿ ಹಿಡಿದು ಬೇಡಿಕೊಂಡರು.

ಪ್ರಶ್ಚಾತ್ತಾಪದಿಂದ ಪರಿತಪಿಸುತ್ತಿರುವ ಆಚಾರ್ಯರನ್ನು ಕಂಡು ದಾಸರಿಗೆ ಅತೀವ ಅನುಕಂಪ ಉಂಟಾಯಿತು. ದಾಸರು ಅವರ ಮೈದಡವಿ ಎಬ್ಬಿಸಿ ಅಭಯ ನೀಡಿದರು. 'ಭಯಪಡಬೇಡಿ, ದೇವರು ಕಾಪಾಡುತ್ತಾನೆ. ಪರಮಕಾರುಣ್ಯನಿಧಿಯಾದ ಪರಮಾತ್ಮ ಕ್ಷಮಿಸಲಾರದ ತಪ್ಪುಗಳನ್ನು ಮನುಷ್ಯರಿಂದ ಮಾಡುವುದಕ್ಕೇ ಸಾಧ್ಯವಿಲ್ಲ. ಭಕ್ತರ ಪಾಪಕರ್ಮಗಳನ್ನು ಕ್ಷಮಿಸಿ ಸಲಹುವುದರಲ್ಲಿ ಲಕ್ಷ್ಮೀಪತಿಗೆ ಸಮರಾದವರು ಮತ್ತೊಬ್ಬರಿಲ್ಲ. ಪಂಡಿತೋತ್ತಮರಾದ ನೀವು ಮೋಕ್ಷಪ್ರದ ಗ್ರಂಥವೆಂದು ಹೆಸರಾದ ಶ್ರೀಜಗನ್ನಾಥದಾಸ ವಿರಚಿತ "ಶ್ರೀಹರಿಕಥಾಮೃತಸಾರ"ಕ್ಕೆ ವ್ಯಾಖ್ಯಾನವನ್ನು ಬರೆಯಿರಿ. ಇದರಿಂದ ನಿಮ್ಮ ಪಾಪ ನಿಶ್ಚಿತವಾಗಿಯೂ ವಿಮೋಚನೆಯಾಗಿ ಜನ್ಮಸಾರ್ಥಕ್ಯಗೊಳ್ಳುತ್ತದೆ. ಭಕ್ತಾನುಕಂಪಿಯಾದ ಶ್ರೀಹರಿಯ ಪರಮಾನುಗ್ರಹವಾಗುತ್ತದೆ' ಎಂದು ತಿಳಿಸಿದರಲ್ಲದೆ ಆಚಾರ್ಯರಿಗೆ "ಪದ್ಮನಾಭ ವಿಠಲ" ಎಂಬ ಅಂಕಿತೋಪದೇಶವನ್ನೂ ನೀಡಿ ಅನುಗ್ರಹಿಸಿದರು.

ಅಂಕಿತೋಪದೇಶವಾದ ನಂತರ ಪದ್ಮನಾಭದಾಸರು ಗುರುವಾಜ್ಞೆಯನ್ನು ಶಿರಸಾವಹಿಸಿ ಹರಿಕಥಾಮೃತಸಾರಕ್ಕೆ ಪ್ರೌಢವಾದ ವ್ಯಾಖ್ಯಾನ ರಚಿಸಿದರು. ತಮ್ಮ ವ್ಯಾಖ್ಯಾನವನ್ನು ಗುರುಗಳಿಗೆ ಅರ್ಪಿಸಿದ ಕೆಲವು ದಿವಸಗಳಲ್ಲಿಯೇ ಪದ್ಮನಾಭದಾಸರು ಪರಂಧಾಮವನ್ನೈದಿದರು. ಹರಿಕಥಾಮೃತಸಾರಕ್ಕೆ ಪದ್ಮನಾಭದಾಸರು ರಚಿಸಿರುವ ವ್ಯಾಖ್ಯಾನ ಅಪೂರ್ವವಾಗಿದ್ದು ಪಂಡಿತ ಪಾಮರರಿಂದಲೂ ಮಾನ್ಯವಾಗಿದೆ. ಮೂಲ ಭಾಗವತ ಶ್ಲೋಕಗಳು ಹಾಗೂ ಪುರಾಣ ವಾಕ್ಯಗಳನ್ನು

ಉದಾಹರಿಸಿ ಹರಿಕಥಾಮೃತಸಾರದ ಅಂತದರ್ಶನ ಮಾಡಿಸುವ ಆ ವ್ಯಾಖ್ಯಾನ ಈಗಲೂ ಜನಪ್ರಿಯವಾಗಿದೆ. ತಂದೆ ಮುದ್ದುಮೋಹನದಾಸರ ಹೃದಯ ವೈಶಾಲ್ಯದಿಂದ ಇಂತಹ ಅಪೂರ್ವ ವ್ಯಾಖ್ಯಾನ ಹರಿದಾಸ ವಾಙ್ಮಯಕ್ಕೆ ಲಭ್ಯವಾಯಿತು.

ಇದೇ ಮಾದರಿಯಲ್ಲಿ ಪ್ರೊದಟೂರಿನ ಹಯವದನರಾಯರ ದೃಷ್ಟಾಂತವೂ ಸಹ ಸ್ವಾರಸ್ಯಪೂರ್ಣವಾಗಿದೆ. ಪ್ರಸಿದ್ಧ ವಕೀಲರಾಗಿದ್ದ ರಾಯರಿಗೆ ಯೌವನಾವಸ್ಥೆಯಲ್ಲಿಯೇ ಪತ್ನೀ ವಿಯೋಗವಾಯಿತು. ಸಂತಾನ ಭಾಗ್ಯವೂ ಇರಲಿಲ್ಲ. ಆ ನಂತರ ರಾಯರ ಬದುಕು ಕವಲೊಡೆಯಿತು. ಪ್ರತಿಭಾನ್ವಿತ ವಕೀಲರಾಗಿ ಕೈತುಂಬಾ ಹಣ ಸಂಪಾದಿಸುತ್ತಿದ್ದ ರಾಯರು ವಿಲಾಸಿ ಜೀವನದ ಬೆನ್ನು ಹತ್ತಿ ಹಣವನ್ನು ನೀರಿನಂತೆ ಚೆಲ್ಲತೊಡಗಿದರು. ಸದಾ ಭೋಗಲಾಲಸೆಯಲ್ಲಿ ಮಗ್ನರಾದರಲ್ಲದೇ ಅನೈತಿಕ ರೀತಿಯಲ್ಲಿ ದೇಹ ಸುಖವನ್ನು ಅರಸುತ್ತಾ ಶ್ವಪಚರಂತೆ ಬಾಳತೊಡಗಿದರು.

ಹೀಗಿದ್ದಾಗ ಒಮ್ಮೆ ಹಯವದನರಾಯರು ಬೆಂಗಳೂರಿನಲ್ಲಿದ್ದ ತಮ್ಮ ಬಂಧುಗಳ ಮನೆಗೆ ಬಂದರು. ದಾಸರಾಯರಿಂದ ಅಂಕಿತೋಪದೇಶವನ್ನು ಪಡೆದಿದ್ದ ಆ ಬಂಧುಗಳ ಮೂಲಕ ಅವರಿಗೆ ದಾಸರ ಪರಿಚಯವಾಯಿತು. ಜ್ಞಾನಿವರೇಣ್ಯರಾದ ದಾಸರ ಮಹಿಮಾನ್ವಿತ ವ್ಯಕ್ತಿತ್ವ, ಮಕ್ಕಳಿಗೂ ದಕ್ಕುವ ಅವರ ಸರಳ ಸ್ವಭಾವ ರಾಯರಿಗೆ ತುಂಬಾ ಇಷ್ಟವಾದವು. ದಾಸರ ವಿಚಾರಧಾರೆಯನ್ನು 'ಪರಮಾರ್ಥ ಚಂದ್ರೋದಯ'ದಲ್ಲಿ ಓದಿ ಅವರ ಬಗ್ಗೆ ಅಪರಿಮಿತ ಗೌರವ ಭಾವನೆಯುಂಟಾಯಿತು. ಸಾಧುಗಳ ಸಂಪರ್ಕದ ಫಲ – ಹಯವದನರಾಯರು ಆತ್ಮಾವಲೋಕನದಲ್ಲಿ ತೊಡಗಿದರು. ತಮ್ಮ ಕುಕರ್ಮಗಳ ಬಗ್ಗೆ ಅವರಿಗೆ ಜಿಗುಪ್ಸೆ ಮೂಡಿತು. ದುರ್ಲಭವಾದ ಮನುಷ್ಯ ಜನ್ಮವನ್ನು ವ್ಯರ್ಥಗೊಳಿಸುತ್ತಿರುವುದಕ್ಕಾಗಿ ತೀವ್ರ ಪರಿತಾಪವುಂಟಾಯಿತು. ತಾವು ನಡೆಸುತ್ತಿರುವ ಪತಿತ ಜೀವನವನ್ನು ತ್ಯಜಿಸಿ ದಾಸರಿಂದ ಉಪದೇಶವನ್ನು ಪಡೆದು ಹರಿದಾಸನಾಗಬೇಕೆಂದು ರಾಯರು ಹಂಬಲಿಸಿದರು.

ಅದರಂತೆ ದಾಸರನ್ನು ಏಕಾಂತದಲ್ಲಿ ಭೇಟಿಯಾಗಿ ಪ್ರಾರ್ಥಿಸಬೇಕೆಂದು ರಾಯರು ವಿಶ್ವೇಶ್ವರಪುರದಲ್ಲಿದ್ದ "ಆನಂದ ನಿಲಯ"ಕ್ಕೆ ಬಂದರು. ಆಗ ದಾಸರು ಕೋಣೆಯೊಂದರಲ್ಲಿ ಕಣ್ಣುಮುಚ್ಚಿ ಕುಳಿತು ಧ್ಯಾನಾಸಕ್ತರಾಗಿದ್ದರು. ಕೋಣೆಯ

ಬಾಗಿಲು ಸ್ವಲ್ಪ ಮಾತ್ರ ತೆರೆದಿತ್ತು. ರಾಯರು ದಾಸರನ್ನು ದರ್ಶಿಸಬೇಕೆಂಬ ಆತುರದಲ್ಲಿ ವಿಚಾರ ಮಾಡದೆ ಬಾಗಿಲನ್ನು ಸ್ವಲ್ಪ ಮುಂದೆ ಮಾಡಿದರು. ಆಗ ಅವರು ಕಂಡ ದೃಶ್ಯ ರೋಮಾಂಚಕರವಾಗಿತ್ತು! ಮಂಚದ ಮೇಲೆ ಕುಳಿತು ಧ್ಯಾನಾಸಕ್ತರಾಗಿದ್ದ ದಾಸರ ಸ್ಥಾನದಲ್ಲಿ ಘಟಸರ್ಪವೊಂದು ಹೆಡೆಯಾಡಿಸುತ್ತಿದ್ದುದ್ದನ್ನು ನೋಡಿ ಹಯವದನರಾಯರು ತತ್ತರಿಸಿ ಹೋದರು. ಅವರ ಬಾಯಿಂದ ಧ್ವನಿಯೇ ಹೊರಡಲಿಲ್ಲ. ಹೀಗೆ ಸ್ವಲ್ಪ ಹೊತ್ತು ಕಳೆದಿರಬೇಕು, ಆ ನಂತರ ರಾಯರಿಗೆ ಘಟ ಸರ್ಪ ಮರೆಯಾಗಿ ದಾಸರ ಹಸನ್ಮುಖ ಕಾಣತೊಡಗಿತು[1]. ದಾಸರು ರಾಯರಿಗೆ ತಮ್ಮ ಸ್ವರೂಪವನ್ನು ತೋರಿಸಿದ್ದರು. ಚಲನಚಿತ್ರದಂತೆ ನಡೆದುಹೋದ ಈ ಘಟನೆ ಹಯವದನರಾರ ಮೇಲೆ ಅಪಾರ ಪ್ರಭಾವ ಬೀರಿತು. ರಾಯರು ಕಣ್ಣೀರಿಡುತ್ತಾ ದಾಸರ ಪಾದಕ್ರಾಂತರಾಗಿ ತಮ್ಮ ತಪ್ಪುಗಳನ್ನು ಹೇಳಿಕೊಂಡು ಅನುಗ್ರಹ ಭಿಕೆ ಬೇಡಿದರು. ಪತಿತೋದ್ಧಾರಕರಾದ ದಾಸರು ರಾಯರು ಕುಮಾರ್ಗದಲ್ಲಿದ್ದರೂ ಯೋಗ್ಯ ಚೇತನವೆಂದು ಗುರುತಿಸಿ ಅವರನ್ನು ಅನುಗ್ರಹಿಸಿದರು. ದಿನಾಂಕ 4.6.1938ರ ಭಾನುವಾರದಂದು ದಾಸರು ನಮ್ಮ ಬಿಂಬಮೂರ್ತಿಯನ್ನು ಪ್ರಾರ್ಥಿಸಿ ರಾಯರಿಗೆ 'ಸೀತಾಪತಿ ರಾಮವಿಠಲ" ಎಂಬ ಅಂಕಿತೋಪದೇಶ ನೀಡಿದರು. ಕಾಕತಾಳೀಯವಾಗಿ ಅಂದು ರಾಯರ ಜನ್ಮ ದಿವಸವೇ ಆಗಿತ್ತು.

ಅಂದಿನಿಂದ ಹಯವದನರಾಯರ ಬದುಕು ಬದಲಾಯಿತು. ಅವರಿಗೆ ಪುನರ್ಜನ್ಮ ಪ್ರಾಪ್ತವಾಯಿತು. ರಾಯರು ಸೀತಾಪತಿ ರಾಮವಿಠಲದಾಸರಾಗಿ ಪರಿವರ್ತಿತರಾಗಿ ತಮ್ಮ ಮುಂದಿನ ಜೀವಿತವನ್ನು ಹರಿಗುರುಗಳ ಸೇವೆಗಾಗಿ ಮುಡಿಪಾಗಿಟ್ಟರು. ದಾಸರಾಯರ ಪಟ್ಟಶಿಷ್ಯರಾಗಿ ಅವರ ದಾಸಧರ್ಮ ಪ್ರಚಾರಕಾರ್ಯಕ್ಕೆ ಪೂರ್ಣ ನೆರವಾದರು. ಗುರುವಾಜ್ಞೆಯಂತೆ ಹಲವಾರು ಸುಜೀವಿಗಳನ್ನು ದಾಸಕೂಟದ ಪವಿತ್ರ ಪರಧಿಯೊಳಗೆ ಬರುವಂತೆ ಮಾಡಿ ತಾವು ಕಂಡುಕೊಂಡ ಬೆಳಕನ್ನು ಇತರರಿಗೂ ಹಂಚಿದರು.

---

1. ಭಯಭೀತರಾಗಿದ್ದ ಹಯವದನರಾಯರಿಗೆ ದಾಸರು ಮುಗುಳ್ನಗುತ್ತಾ "ಏನಪ್ಪಾ, ಹೆದರಿಬಿಟ್ಟೆಯಾ? ಇನ್ನು ಮುಂದೆ ನಾವು ಧ್ಯಾನಾಸಕ್ತರಾಗಿ ಕುಳಿತ್ತಿದ್ದಾಗ ಹೀಗೆ ಸೂಚನೆಯಿಲ್ಲದೆ ಒಳಗೆ ಪ್ರವೇಶಿಸಬೇಡ" ಎಂದು ಹೇಳಿದರಂತೆ. ಇದೇ ತರಹದ ಅನುಭವ ದಾಸರಿಂದ "ಇಂದಿರಾಪತಿ ವಿಠಲ" ಎಂಬ ಅಂಕಿತೋಪದೇಶ ಪಡೆದಿದ್ದ ಭಕ್ತೆಯೊಬ್ಬರಿಗೆ ತಿರುಪತಿ ಕ್ಷೇತ್ರದಲ್ಲಿದ್ದಾಗ ಆಗಿದೆ.

ಶಿಕ್ಷಣ ಇಲಾಖೆಯಲ್ಲಿ ಅಧಿಕಾರಿಗಳಾಗಿದ್ದು ನಿವೃತ್ತರಾದ ಅನಂತಪುರದ ಶ್ರೀವೆಂಕಟನಾರಾಯಣರಾಯರು ತಂದೆ ಮುದ್ದುಮೋಹನದಾಸರಿಂದ ಅಂಕಿತೋಪದೇಶ ಪಡೆದ ರೀತಿಯೂ ಸಹ ಸ್ವಾರಸ್ಯಕರವಾಗಿದೆ. ಒಮ್ಮೆ ದಾಸರಾಯರ ಪ್ರೇರಣೆಯಂತೆ ಅವರು ದೇವರಾಯನ ದುರ್ಗಕ್ಕೆ ಹೋಗಿದ್ದಾಗ ಅಲ್ಲಿನ ಶ್ರೀಯೋಗಾನರಸಿಂಹ ಸ್ವಾಮಿಬೆಟ್ಟದಲ್ಲಿರುವ ತೀರ್ಥವನ್ನು ತಲೆಗೆ ಪ್ರೋಕ್ಷಣ ಮಾಡಿಕೊಳ್ಳುತ್ತಿರುವ ಸಂದರ್ಭದಲ್ಲಿ ಅವರಿಗೆ "ಆನಂದಾನಂತಾ" ಎಂಬ ಅಶರೀರವಾಣಿಯೊಂದು ಕೇಳಿಬಂದಿತು. ಇದನ್ನು ದಾಸರ ಅನುಗ್ರಹದ ಧ್ವನಿಯೆಂದೇ ಗುರುತಿಸಿ ರಾಯರು ಅಂದಿನಿಂದ "ಆನಂದಾನಂತ ವಿಠಲ" ಎಂಬ ಅಂಕಿತವನ್ನಿಟ್ಟುಕೊಂಡು ಪರಮಾತ್ಮನನ್ನು ಆರಾಧಿಸತೊಡಗಿದರು.

## ದಾಸರ ಕೊನೆಯ ದಿನಗಳು

ತಂದೆ ಮುದ್ದುಮೋಹನದಾಸರು ತಮ್ಮ ಬದುಕಿನ ಕೊನೆಯ ದಿನಗಳಲ್ಲಿ ರಾಣಿಬೆನ್ನೂರು ಮತ್ತು ಕದರಮಂಡಲಗಿ ಕ್ಷೇತ್ರಕ್ಕೆ ಮೂರು ಬಾರಿ ಭೇಟಿಯಿತ್ತು ಅಲ್ಲಿನ ಆಸ್ತಿಕ ವಲಯಕ್ಕೆ ದಾಸಧರ್ಮವನ್ನು ಬೋಧಿಸಿದರು. ಅಲ್ಲಿಯೂ ದಾಸರಿಗೆ ವಿಪುಲ ಶಿಷ್ಯ ಸಂಪತ್ತು ಲಭ್ಯವಾಯಿತು. ದಾಸರ ಪ್ರಭಾವಕ್ಕೊಳಗಾಗಿ ಕಾವ್ಯರತ್ನ ಎಂಬ ಬಿರುದು ಗಳಿಸಿದ್ದ ಶ್ರೀವಡವಿ ಭೀಮಾಚಾರ್ಯರೇ ಮೊದಲಾದ ಅನೇಕ ವಿದ್ವಾಂಸರು ದಾಸರಿಂದ ಅಂಕಿತೋಪದೇಶ ಪಡೆದು ಹರಿದಾಸರಾದರು. ಗುರುವಾಜ್ಞೆಯಂತೆ ದಾಸರು ಜಾತಿ, ಮತ, ಕುಲಗಳನ್ನು ಪರಿಗಣಿಸದೆ ಸಚ್ಚೇತನಗಳನ್ನು ಗುರುತಿಸಿ ಅಂಕಿತಪ್ರದಾನ ಮಾಡಿದರು. ಅವರಲ್ಲಿ ನೇಯ್ಗೆಯವರಾದ ಸಾಲೇ ರಾಮಣ್ಣ ಮತ್ತು ಕುರುಬ ಕುಲದ ಭರಮಣ್ಣ ಎಂಬುವವರೂ ಸೇರಿದ್ದಾರೆ. ಅವರಿಗೆ ದಾಸರು ಕ್ರಮವಾಗಿ "ಹನುಮೇಶರಾಮ ವಿಠಲ" ಮತ್ತು "ಹನುಮನೊಡೆಯ ವಿಠಲ" ಎಂಬ ಅಂಕಿತಗಳನ್ನು ನೀಡಿ ಆಶೀರ್ವದಿಸಿದ್ದಾರೆ.

ರಾಣಿಬೆನ್ನೂರಿಗೆ ಸಮೀಪವಿರುವ ಕದರುಮಂಡಲಿಗಿ ಕ್ಷೇತ್ರ ದಾಸರನ್ನು ಅಪಾರವಾಗಿ ಆಕರ್ಷಿಸಿಬಿಟ್ಟಿತ್ತು. ಪುರಾಣಪ್ರಸಿದ್ಧ ಆ ಪುಣ್ಯಕ್ಷೇತ್ರದಲ್ಲಿ ಜನಮೇಜಯ ರಾಜನಿಂದ ಪ್ರತಿಷ್ಠಿತರಾಗಿ ಭಕ್ತಾಭೀಷ್ಟಪ್ರದರಾಗಿ ವಿರಾಜಿಸುತ್ತಿರುವ ಶ್ರೀಕಾಂತೇಶ ಪ್ರಾಣದೇವರ ದರ್ಶನ ಮಾತ್ರದಿಂದಲೇ

ದಾಸರು ಪುಳಕಿತರಾಗುತ್ತಿದ್ದರು. ಸಕಲ ಜೀವಿಗಳಲ್ಲಿ ಅನವರತ ಶ್ವಾಸಜಪಗಳನ್ನು ಮಾಡುತ್ತಾ ಶ್ರೀಹರಿಯ ಸಾರ್ವಭೌಮತ್ವವನ್ನು ಜಗತ್ತಿನಲ್ಲಿ ಎತ್ತಿ ಹಿಡಿದಿರುವ ಆ ಪ್ರಾಣನಾಥನನ್ನು ಎಷ್ಟು ಪರಿಯಾಗಿ ಗುಣಗಾನ ಮಾಡಿದರೂ ದಾಸರಿಗೆ ತೃಪ್ತಿಯಾಗುತ್ತಿರಲಿಲ್ಲ.

"ಎನ್ನೊಡೆಯನೇ ಹನುಮ। ಹನುಮನೇ
ಎನ್ನೊಡೆಯ। ಘನ್ನ ಕದರುಮಂಡಲಗಿ
ಹನುಮಯ್ಯ ಎನ್ನ ಒಡೆಯ। ಎನ್ನಯ್ಯ
ಶ್ರೀತಂದೆ ಮುದ್ದುಮೋಹನ ವಿಠಲ ಭಕ್ತ ಘನ್ನ
ಹನುಮಯ್ಯನೇ ಎನ್ನ ಒಡೆಯ"

ಎಂಬ ಉಗಾಭೋಗದಲ್ಲಿ ದಾಸರಿಗೆ ಕದರುಮಂಡಲಿಗಿ ಕಾಂತೇಶನಲ್ಲಿದ್ದ ಪ್ರಖರ ಭಕ್ತಿ, ನಿಷ್ಠೆಗಳು ವ್ಯಕ್ತವಾಗುತ್ತವೆ.

ಮೂರನೆಯ ಬಾರಿ ಕದರುಮಂಡಲಿಗಿ ಕ್ಷೇತ್ರಕ್ಕೆ ಭೇಟಿಯಿತ್ತಾಗ ದಾಸರಿಗೆ ವೃದ್ಧಾಪ್ಯ. ಕಾಂತೇಶನ ಸನ್ನಿಧಿಯಲ್ಲಿ ಧ್ಯಾನಾಸಕ್ತರಾಗಿದ್ದಾಗ ದಾಸರಿಗೆ ಮತ್ತೆ ಕಾಂತೇಶನ ದರ್ಶನ ಭಾಗ್ಯ ಲಭ್ಯವಾಗುವುದೊ ಇಲ್ಲವೋ ಎಂಬ ಆತಂಕವುಂಟಾಯಿತು. ತಮ್ಮ ಬದುಕಿನ ಕೊನೆಯ ಕ್ಷಣದವರೆಗೂ ಪ್ರಾಣನಾಥನನ್ನು ದರ್ಶಿಸಿ, ಆರಾಧಿಸುವ ಹಂಬಲ ಅವರಲ್ಲಿ ತುಂಬಿ ಬಂದಿತು. ಕದರುಮಂಡಲಿಗಿಯಿಂದ ಪ್ರಾಣದೇವರ ಮೂರ್ತಿಯೊಂದನ್ನು ತೆಗೆದು ಕೊಂಡು ಹೋಗಿ ತಮ್ಮ ಊರಿನಲ್ಲಿ ಪ್ರತಿಷ್ಠಾಪಿಸಲು ದಾಸರು ಅಪೇಕ್ಷಿಸಿದರು. ತಮ್ಮ ಅಪೇಕ್ಷೆಯನ್ನು ದೈವ ಪ್ರೇರಣೆಯೆಂದು ಭಾವಿಸಿದ ದಾಸರು ತಮ್ಮ ಶಿಷ್ಯ ಭರಮಣ್ಣನಿಂದ ಕದರುಮಂಡಲಿಗಿ ಸಮೀಪದ ಗುಡ್ಡಗಾಡಿನಲ್ಲಿದ್ದ ಪ್ರಾಣ ಪ್ರತೀಕವೊಂದನ್ನು ತರಿಸಿ ತಮ್ಮೊಡನೆ ತೆಗೆದುಕೊಂಡು ಬಂದರು.

ಕದರುಮಂಡಲಿಗಿಯಿಂದ ಬೆಂಗಳೂರಿಗೆ ಹಿಂದಿರುಗಿದ ನಂತರ ದಾಸರು ತಮ್ಮ ಹಿರಿಯ ಮಗನಾದ ವೆಂಕಟರಾಯರಿಗೆ "ವರದರಾಜ ವಿಠಲ" ಎಂಬ ಅಂಕಿತಪ್ರದಾನ ಮಾಡಿ ಅವರನ್ನು ಅನುಗ್ರಹಿಸಿದರು. ತಾವು ನಡೆಸುತ್ತಿದ್ದ "ಪರಮಾರ್ಥ ಚಂದ್ರೋದಯ"ದ ಪ್ರಕಟನ ಕಾರ್ಯವನ್ನು ವೆಂಕಟರಾಯರಿಗೆ ವಹಿಸಿ ತಾವು ಮುಂದೆ ಮಾಡಬೇಕಾದ ಕಾರ್ಯಗಳ ಕಡೆಗೆ ಗಮನ ಕೊಡತೊಡಗಿದರು.

ಪ್ರಾಣದೇವರನ್ನು ಪ್ರತಿಷ್ಠಾಪಿಸಲು ಬೆಂಗಳೂರಿಗಿಂತ ತಾವು ಸ್ಥಾಪಿಸಿದ್ದ ದೇವರಾಯನದುರ್ಗದ ದಾಸಕೂಟ ಸಭಾ ಮಂದಿರವೇ ಸೂಕ್ತವಾದ ಸ್ಥಳ ಎಂದು ದಾಸರಿಗೆ ತೋರಿತು. ಅದರಂತೆ ದಾಸರು ತಮ್ಮ ಪ್ರಮುಖ ಶಿಷ್ಯರನ್ನು ಕರೆದು ತಮ್ಮ ಮನೋಭಿಲಾಷೆಯನ್ನು ತಿಳಿಸಿ ನೆರವಾಗುವಂತೆ ಆದೇಶಿಸಿದರು. ಶಿಷ್ಯರು ಗುರುಗಳ ಆಜ್ಞೆಯನ್ನು ಶಿರಸಾವಹಿಸಿ ದೇವರಾಯನದುರ್ಗಕ್ಕೆ ತೆರಳಿ ಅಲ್ಲಿ ಪ್ರಾಣದೇವರ ಪ್ರತಿಷ್ಠೆಗೆ ಅಗತ್ಯವಾದ ಏರ್ಪಾಟುಗಳನ್ನು ಮಾಡ ತೊಡಗಿದರು. ತಮ್ಮ ಅವತಾರದ ಅಂತಿಮ ಘಟ್ಟವನ್ನು ಅರಿತುಕೊಂಡ ದಾಸರು ಬೆಂಗಳೂರನ್ನು ಬಿಟ್ಟು ದೇವರಾಯನದುರ್ಗದಲ್ಲಿ ನೆಲೆಸಲು ಸಂಕಲ್ಪಿಸಿ ಪ್ರಮಾಥಿ ಸಂವತ್ಸರದ ಫಾಲ್ಗುಣ ಶುದ್ಧ ತದಿಗೆಯಂದು ಹೊರಟು ದೇವರಾಯನದುರ್ಗದ ದಾಸಕೂಟ ಸಭಾ ಮಂದಿರವನ್ನು ಸೇರಿದರು.

## ಕೊನೆಯ ಅಂಕಿತೋಪದೇಶ

ಕದರುಮಂಡಲಿಗಿಯಿಂದ ತಂದ ಪ್ರಾಣದೇವರ ಪ್ರತೀಕವನ್ನು ದೇವರಾಯನದುರ್ಗದ ದಾಸಕೂಟ ಸಭಾ ಮಂದಿರದಲ್ಲಿ ಪ್ರತಿಷ್ಠಾಪಿಸಲು ಸಕಲ ಸಿದ್ಧತೆಗಳು ನಡೆಯುತ್ತಿರುವಾಗಲೇ ದಾಸರ ಶಿಷ್ಯ ಸಂಪತ್ತಿಗೆ ಮತ್ತೊಂದು ಅನರ್ಘ್ಯ ರತ್ನ ಸೇರ್ಪಡೆಯಾಯಿತು. ಆ ಅನರ್ಘ್ಯ ರತ್ನವೇ ಮೈಸೂರಿನ ಶ್ರೀ ಎಂ.ಆರ್. ಗೋವಿಂದರಾವ್ ಎಂಬ ದ್ವಿಜೋತ್ತಮರು. ಇವರೇ ದಾಸರ ಕಟ್ಟ ಕಡೆಯ ಶಿಷ್ಯರು. ಲೋಕೋಪಯೋಗಿ ಇಲಾಖೆಯ ಸಬ್ ಓವರ್ಸಿಯರ್ ಹುದ್ದೆಯಲ್ಲಿದ್ದ ಗೋವಿಂದರಾಯರು ಆಗ ಹಾಸನದಲ್ಲಿ ವಾಸಿಸುತ್ತಿದ್ದರು. ಅಲ್ಲಿನ ವಿದ್ಯಾ ಇಲಾಖೆಯಲ್ಲಿ ಉದ್ಯೋಗದಲ್ಲಿದ್ದ ಶ್ರೀ ಆರ್. ರಾಮಚಂದ್ರರಾವ್ ಅವರ ಮೂಲಕ ಗೋವಿಂದರಾಯರಿಗೆ ದಾಸಕೂಟದ ಪರಿಚಯವಾಗಿತ್ತು. ರಾಮಚಂದ್ರರಾಯರು ತಂದೆ ಮುದ್ದುಮೋಹನದಾಸರಿಂದ ಅಂಕಿತೋಪದೇಶ ಪಡೆದಿದ್ದ ಶ್ರೀಉರಗಾದ್ರಿವಾಸ ವಿಠಲದಾಸರ ಶಿಷ್ಯಸಂತತಿಗೆ ಸೇರಿದವರು. “ತಂದೆ ವೆಂಕಟೇಶ ವಿಠಲ” ಎಂಬ ಮುದ್ರಿಕೆಯಿಂದ ಗಹನವೆನ್ನಿಸುವ ಅಧ್ಯಾತ್ಮಿಕ ಅರ್ಥಗಳುಳ್ಳ ಪ್ರೌಢಶೈಲಿಯ ನೂರಾರು ಕೀರ್ತನೆಗಳನ್ನು ರಾಮಚಂದ್ರ ರಾಯರು ರಚಿಸಿದ್ದರು.

ತಂದೆ ಮುದ್ದುಮೋಹನದಾಸರ ವಿಚಾರ ಗೋವಿಂದರಾಯರಿಗೆ

ರಾಮಚಂದ್ರರಾಯರಿಂದ ತಿಳಿದಿತ್ತು. ಆಗಾಗ ಅವರು ತಂದುಕೊಡುತ್ತಿದ್ದ ದಾಸರ "ಪರಮಾರ್ಥ ಚಂದ್ರೋದಯ" ಮಾಸ ಪತ್ರಿಕೆಯನ್ನು ರಾಯರು ಶ್ರದ್ಧೆಯಿಂದ ಓದುತ್ತಿದ್ದರು. ದಾಸಕೂಟದ ಭಜನೆ, ಏಕಾದಶಿ, ಜಾಗರಣೆ ಮುಂತಾದ ಕಾರ್ಯಕ್ರಮಗಳಲ್ಲಿ ನಿಯಮಿತವಾಗಿ ಭಾಗವಹಿಸುತ್ತಿದ್ದರು. ಇದರಿಂದ ರಾಯರಿಗೆ ಹರಿದಾಸ ಸಾಹಿತ್ಯದ ಅಧ್ಯಯನ ಮಾಡಲು ಪ್ರೇರಣೆಯುಂಟಾಗಿತ್ತು. "ಅಂಕಿತವಿಲ್ಲದ ದೇಹ ನಿಶಿದ್ಧ" ಎಂದು ಶ್ರೀಪುರಂದರದಾಸರು ಹೇಳಿದಂತೆ ರಾಯರು ಶ್ರೀತಂದೆ ಮುದ್ದುಮೋಹನ ದಾಸರಿಂದ ಅಂಕಿತೋಪದೇಶವನ್ನು ಸ್ವೀಕರಿಸಿ ಹರಿದಾಸರಾಗಲು ಬಯಸಿದರು.

ಮಿತ್ರರಾದ ರಾಮಚಂದ್ರರಾಯರ ಸಲಹೆಯಂತೆ ಗೋವಿಂದರಾಯರು ನೀತಗುರುವಿನಿಂದ ದಾಸದೀಕ್ಷೆಯನ್ನು ಪಡೆದು ಜನ್ಮ ಸಾರ್ಥ್ಯಕ್ಯ ಮಾಡಿಕೊಳ್ಳಲು ದೇವರಾಯನದುರ್ಗಕ್ಕೆ ಬಂದರು. ದಾಸರ ಭವ್ಯ ವ್ಯಕ್ತಿತ್ವ, ಶಿಷ್ಯವಾತ್ಸಲ್ಯ, ಅಸೀಮ ಪಾಂಡಿತ್ಯ ಮುಂತಾದವುಗಳ ಬಗ್ಗೆ ಕೇಳಿದ್ದ ರಾಯರಿಗೆ ದಾಸಕೂಟ ಸಭಾಮಂದಿರದಲ್ಲಿ ದಾಸರನ್ನು ಕಂಡ ಕೂಡಲೇ ಅಮಿತಾನಂದವಾಯಿತು. ಅತ್ಯಂತ ಆಪ್ತವಾದ ಅಪೂರ್ವ ನಿಧಿಯೊಂದು ಗೋಚರಿಸಿದಂತಾಯಿತು. "ಇವರೇ ನಿನ್ನ ಗುರು" ಎಂದು ರಾಯರ ಮನಸ್ಸು ನುಡಿಯಿತು. ರಾಯರು ದಾಸರಿಗೆ ಶಿರಸಾಷ್ಟಾಂಗ ನಮಸ್ಕಾರ ಮಾಡಿ ತಮ್ಮ ಮನಸ್ಸಿನ ಹಂಬಲವನ್ನು ಅವರಲ್ಲಿ ತೋಡಿಕೊಂಡರು.

ತಂದೆ ಮುದ್ದುಮೋಹನದಾಸರು ಗೋವಿಂದದಾಸರ ಮೈದಡವಿ ಎಬ್ಬಿಸಿ ಕುಶಲ ಪ್ರಶ್ನೆಮಾಡಿ ಆತ್ಮೀಯತೆಯಿಂದ ಮಾತನಾಡಿಸಿದರು. ಎಷ್ಟೋ ದಿವಸಗಳ ಪರಿಚಯವಿರುವಂತೆ ತೋರುವ ವರ್ತನೆ, ವಾತ್ಸಲ್ಯಭರಿತವಾದ ಮಾತುಗಳು ರಾಯರನ್ನು ಸಂಪೂರ್ಣವಾಗಿ ಸೆರೆಹಿಡಿದವು. ದಾಸರ ಪ್ರಖರ ಕಣ್ಣುಗಳಲ್ಲಿ ಗೋವಿಂದರಾಯರು ತಮ್ಮ ಬಾಳಿನ ಗುರಿಯನ್ನು ಕಂಡುಕೊಂಡರು.

ಗೋವಿಂದರಾಯರ ಮನೋದಾರ್ಢ್ಯವನ್ನು ಕಂಡು ದಾಸರಿಗೆ ಆನಂದ ವಾಯಿತು. ರಾಯರ ಸಾತ್ವಿಕ ಚೇತನ ಜ್ಞಾನಿಗಳಾದ ದಾಸರಿಗೆ ಗೋಚರ ವಾಯಿತು. ಇವರಿಂದ ಹರಿದಾಸ ಸಾಹಿತ್ಯಕ್ಕೆ ಅನುಪವಾದ ಸೇವೆ ಸಲ್ಲುವುದೆಂದು

ಮನಗೊಂಡು ದಾಸರು ಪ್ರಮಾಥಿ ಸಂವತ್ಸರದ ಫಾಲ್ಗುಣ ಬಹುಳ ಪ್ರತಿಪದೆಯೆಂದು ಕ್ರಿ.ಶ. 24.3.1940ರಲ್ಲಿ ರಾಯರಿಗೆ ಅಂಕಿತೋಪದೇಶವನ್ನು ತಮ್ಮ ಬಿಂಬಮೂರ್ತಿಯನ್ನು ಹೀಗೆ ಪ್ರಾರ್ಥಿಸುತ್ತಾ ಅನುಗ್ರಹಿಸಿದರು:

"ಗುರುಗೋವಿಂದ ವಿಠಲನೆ ನೀನವರ
ಕರುಣಾ ಕಟಾಕ್ಷದಿಂದೀಕ್ಷಿಸುತ ಕಾಪಾಡೋ ಹರಿಯೇ ॥ಪ॥

ಗರುಡ ಗಮನನೆ ದೇವ ಗರ್ವಗಳ ಪರಿಹರಿಸಿ
ಸರ್ವಾಂತರಾತ್ಮಕನೆ ಕಾಪಾಡೋ ಹರಿಯೇ ॥ಅ.ಪ॥

ಸೃಷ್ಟ್ಯಾದಿ ಕರ್ತನೆ ಸುಗುಣ ಮೂರುತಿ ದೇವ
ಕಷ್ಟಗಳ ಪರಿಹರಿಸಿ ಕಾಪಾಡೋ ಹರಿಯೇ।
ಕೃಷ್ಣಮೂರುತಿ ಹೃದಯ ಅಷ್ಟದಳ ಮಧ್ಯದಲಿ
ದೃಷ್ಟಿಗೋಚರನಾಗಿ ಕಾಪಾಡೋ ಹರಿಯೇ ॥೧॥

ಅಪಾರ ಮಹಿಮನೆ ಅಪದ್ಬಾಂಧವನಾಗಿ
ತಾಪತ್ರಯಗಳ ಕಡಿದು ಕಾಪಾಡೋ ಹರಿಯೇ।
ಕೋಪತಾಪಾದಿ ದುರ್ಗಗಳನೆ ಪರಿಹರಿಸಿ ಭವ
ಕೂಪಾರದಿಂದೆತ್ತಿ ನೀ ಕಾಪಾಡೋ ಹರಿಯೇ ॥೨॥

ಹರಿಯೇ ಸರ್ವೋತ್ತಮನು ಶಿರಿವಾಯು ಮೊದಲಾದ ಸುರರೆಲ್ಲ ಕಿಂಕರರೆಂಬ
ವರಮಧ್ವಶಾಸ್ತ್ರ ಸಾರವನೆ ತಿಳಿಸಿ ಕಾಪಾಡೋ ಹರಿಯೇ।
ಪರಮಪುರುಷನೆ ತಂದೆ ಮುದ್ದುಮೋಹನ ವಿಠಲನೇ ನಿನ್ನ
ಪರತರಾತ್ಮಕವಾದ ದಿವ್ಯ ರೂಪವ ತೋರಿ ಕಾಪಾಡೋ ಹರಿಯೇ ॥೩॥

ಅಂಕಿತೋಪದೇಶ ಪಡೆದ ನಂತರ ಗೋವಿಂದರಾಯರು ಗುರು ಗೋವಿಂದ ವಿಠಲದಾಸರಾದರು. ಅಂಕಿತ ಕೊಡುವ ಸಂದರ್ಭದಲ್ಲಿ ತಂದೆ ಮುದ್ದುಮೋಹನದಾಸರು "ನೀನೇ ಕೊನೆಯವರು, ಇನ್ನು ಯಾರಿಗೂ ಕೊಡುವುದಿಲ್ಲ" ಎಂದು ಹೇಳಿದ್ದರಂತೆ. ಅದರಂತೆ ಗುರುಗೋವಿಂದದಾಸರೇ ದಾಸರ ಕೊನೆಯ ಶಿಷ್ಯರಾದರು. ಬಾಗೇಪಲ್ಲಿ ಶೇಷದಾಸರಿಗೆ "ಪ್ರಾಣನಾಥ ವಿಠಲ" ಎಂಬ ಅಂಕಿತವನ್ನು ದಯಪಾಲಿಸುವುದರಿಂದ ಆರಂಭವಾದ ದಾಸರ ಅಂಕಿತ ಪ್ರದಾನದ ಮಹತ್ಕಾರ್ಯ ಗೋವಿಂದರಾಯರಿಗೆ "ಗುರುಗೋವಿಂದ ವಿಠಲ" ಎಂಬ ಅಂಕಿತೋಪದೇಶ ನೀಡುವುದರೊಂದಿಗೆ ಮುಕ್ತಾಯ

ವಾಯಿತು. ಆ ತನಕ ಜಗತ್ತು ಕಂಡರಿಯದ ಶೈಲಿಯಲ್ಲಿ ದಾಸ ಪರಂಪರೆಯನ್ನು ಸಮೃದ್ಧವಾಗಿ ಬೆಳೆಸುವ ಕಾರ್ಯ ಭಗವತ್ಕೃಪೆಯಿಂದ ಪೂರ್ಣಗೊಂಡಿತು. ಗುರುಗೋವಿಂದದಾಸರು ದಾಸರ 1165ನೇ ಶಿಷ್ಯರಾದರು.

ಮುಂದೆ ಶ್ರೀಗುರುಗೋವಿಂದದಾಸರು ಆತ್ಮೋದ್ಧಾರದ ಹೆದ್ದಾರಿ ತೋರಿಸಿದ ತಂದೆ ಮುದ್ದುಮೋಹನ ದಾಸರ ಕೀರ್ತಿಯನ್ನು ಲೋಕದಲ್ಲಿ ಅಜರಾಮರಗೊಳಿಸಿದರು. ಗುರುಗಳಂತೆಯೇ ದಾಸಧರ್ಮ ಪ್ರಚಾರಕ್ಕೆ ತಮ್ಮ ಬದುಕನ್ನು ಮೀಸಲಿಟ್ಟು ದಾಸ ಪರಂಪರೆಯನ್ನು ವ್ಯಾಪಕವಾಗಿಯೂ, ಸಮೃದ್ಧವಾಗಿಯೂ ಬೆಳೆಸಿದರು. "ಗುರುಕೃಪಾ ಗ್ರಂಥಮಾಲೆ"ಯನ್ನು ಸ್ಥಾಪಿಸಿ ಅದರ ಮೂಲಕ ದಾಸರು ದಶೋಪನಿಷತ್ತುಗಳನ್ನು ಸರಳ, ಸುಂದರವಾದ ಪದ್ಯರೂಪದಲ್ಲಿ ಕನ್ನಡ ಭಾಷೆಗೆ ಅನುವಾದಿಸಿದರು. ತಮ್ಮ ಗುರುಗಳ ಮತ್ತು ಪರಮ ಗುರುಗಳ ಜೀವನ-ಸಾಧನೆಗಳನ್ನು ಪರಿಚಯಿಸಿದರಲ್ಲದೆ "ಹರಿಭಕ್ತ ವಿಜಯ" ಎಂಬ ಹೆಸರಿನಲ್ಲಿ ಹಲವಾರು ಹರಿದಾಸ ಶ್ರೇಷ್ಠರ ಜೀವನ ಚರಿತ್ರೆಗಳನ್ನು ಬರೆದರು. ಕರ್ನಾಟಕದ ಮೋಲೆ ಮೂಲೆಯಲ್ಲೂ ಮಿಂಚಿನಂತೆ ಸಂಚರಿಸಿ, ಹುಳ ಹಿಡಿದು ಹಾಳಾಗುತ್ತಿದ್ದ ಅನೇಕ ಹರಿದಾಸರ ಕೃತಿಗಳನ್ನು ಸಂಶೋಧಿಸಿ ಬೆಳಕಿಗೆ ತಂದರು. "ಸ್ವಾಪ್ನ ವೃಂದಾವನಾಖ್ಯಾನ"ವನ್ನು ಕನ್ನಡ ತಾತ್ಪರ್ಯ ಸಹಿತ ಪ್ರಕಟಿಸಿ ಶ್ರೀವಾದಿರಾಜ ಸ್ವಾಮಿಗಳ ಕೃಪೆಗೆ ಪಾತ್ರರಾದರು. ಗುರುಗೋವಿಂದ ವಿಠಲಾಂಕಿತದಲ್ಲಿ ಏಳುನೂರಕ್ಕೂ ಮಿಕ್ಕು ಕೀರ್ತನೆಗಳನ್ನು ರಚಿಸಿದರು. ಇನ್ನೂರೈವತ್ತಕ್ಕೂ ಹೆಚ್ಚು ಸುಜೀವಿಗಳಿಗೆ ಅಂಕಿತೋಪದೇಶ ನೀಡಿ ಸಾಧನ ಮಾರ್ಗ ತೋರಿಸಿದರು. ಮೈಸೂರಿನ ತಮ್ಮ ಸ್ವಗೃಹದಲ್ಲಿ ಪಾಂಡುರಂಗ ಮತ್ತು ಮುಖ್ಯಪ್ರಾಣದೇವರನ್ನು ಪ್ರತಿಷ್ಠಾಪಿಸಿ ಮನೆಯನ್ನೇ ದೇವರ ಮಂದಿರವನ್ನಾಗಿಸಿದರು. ದಾಸವರೇಣ್ಯರಾದ ಶ್ರೀಪುರಂದರರ ಆರಾಧನೋತ್ಸವ ವನ್ನು ದೇಶದ ನಾನಾ ಭಾಗಗಳಲ್ಲಿ ಪ್ರತಿ ವರ್ಷವೂ ಅರ್ಥಪೂರ್ಣವಾಗಿ ಆಚರಿಸಿದರು. ಶ್ರೀಜಗನ್ನಾಥದಾಸರ ಕರಾರ್ಚಿತವಾದ ಶ್ರೀಹಯಗ್ರೀವ ಮುಂತಾದ ದೇವತಾಮೂರ್ತಿಗಳನ್ನು ಪೂಜಿಸುತ್ತಾ ಹರಿವಾಯುಗುರುಗಳ ಸೇವೆಯಲ್ಲಿ ತಮ್ಮನ್ನು ತಾವು ಶ್ರೀಗಂಧದಂತೆ ತೇಯ್ದುಕೊಂಡರು. ಬದರಿಯಾತ್ರೆಯನ್ನು ಎರಡು ಬಾರಿ ಮಾಡಿದರಲ್ಲದೆ ಭಾರತದ ಬಹುತೇಕ ಎಲ್ಲಾ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿದರು. ತಮ್ಮ ಗುರುಗಳಂತೆಯೇ ಧಾರ್ಮಿಕ

ಪತ್ರಿಕೋದ್ಯಮದ ಅಧ್ವರ್ಯರಾಗಿ "ಹರಿದಾಸ ದೀಪಿಕಾ" ಎಂಬ ಮಾಸ ಪತ್ರಿಕೆಯನ್ನು ಪ್ರಕಟಿಸುತ್ತಾ ಹರಿದಾಸ ಸಾಹಿತ್ಯ ಪ್ರಚಾರಕ್ಕಾಗಿ ದೇಶ ಪರ್ಯಟನೆ ಮಾಡಿದರು. ಗುರುಗೋವಿಂದದಾಸರು ತಂದೆ ಮುದ್ದುಮೋಹನದಾಸರಿಗೆ ತಕ್ಕ ಶಿಷ್ಯರೆಂಬ ಸತ್ಕೀರ್ತಿಯನ್ನು ಸಂಪಾದಿಸಿ ತಾವು ಮಾಡಿದ ದಾಸಧರ್ಮ ಸೇವೆಗಾಗಿ 'ಹರಿದಾಸ ಕುಲತಿಲಕ, ದಾಸಧರ್ಮ ಪ್ರವರ್ಧಕ" ಎಂಬ ಅನ್ವರ್ಥ ಬಿರುದಗಳನ್ನು ಗಳಿಸಿ ಕ್ರಿ.ಶ. 1983ರ ಮಾರ್ಗಶಿರ ಬಹುಳ ದ್ವಾದಶಿಯಂದು ಹರಿಸ್ಮರಣೆಯನ್ನು ಮಾಡುತ್ತಾ ಹರಿಪುರವನ್ನು ಸೇರಿದರು.

## ಸುಂದರೇಶ ಪ್ರಾಣದೇವರ ಪ್ರತಿಷ್ಠೆ

ದೇವರಾಯನದುರ್ಗದ ದಾಸಕೂಟ ಸಭಾಮಂದಿರದಲ್ಲಿ ಪ್ರಾಣದೇವರ ಪ್ರತಿಷ್ಠಾಪನೆಗೆ ಅಗತ್ಯವಾದ ಗರ್ಭಗುಡಿಯ ಕಟ್ಟಡಕಾರ್ಯ ತ್ವರೆಯಿಂದ ಸಾಗುತ್ತಿತ್ತು. ದೇಶದ ನಾನಾ ಭಾಗಗಳಿಂದ ಬಂದ ದಾಸರ ಶಿಷ್ಯರು ಈ ಮಂಗಳ ಕಾರ್ಯಕ್ಕಾಗಿ ಟೊಂಕಕಟ್ಟಿ ನಿಂತಿದ್ದರು. ಹಗಲುರಾತ್ರಿ ಕೆಲಸ ನಡೆಯುತ್ತಿತ್ತು. ಶ್ರೀ ಲಕ್ಷ್ಮೀನರಸಿಂಹಸ್ವಾಮಿಯ ರಥೋತ್ಸವ ಮುಗಿದು ಇನ್ನೂ ಎರಡು–ಮೂರು ದಿನಗಳಾಗಿದ್ದರಿಂದ ರಥೋತ್ಸವಕ್ಕಾಗಿ ದೇವರಾಯನದುರ್ಗಕ್ಕೆ ಬಂದಿದ್ದ ಭಕ್ತಾದಿಗಳು ಪೂರ್ಣವಾಗಿ ಚದುರಿರಲಿಲ್ಲ. ಕೆಲವು ಭಕ್ತಾದಿಗಳು, ದಾಸ ಸಾಹಿತ್ಯಾಭಿಮಾನಿಗಳು ದಾಸರನ್ನು ಕೂಡಿಕೊಂಡರು.

ದಾಸರು ಎಂದಿನಂತೆ ಶಾಂತಚಿತ್ತರಾಗಿದ್ದರೂ ಅವರಲ್ಲಿ ಒಂದು ತೆರನಾದ ಕಾತುರತೆ ಕಂಡುಬರುತ್ತಿತ್ತು. ತಮ್ಮ ಅವತಾರದ ಕೊನೆಯ ಘಟ್ಟವಾದ ಪ್ರಾಣದೇವರ ಪ್ರತಿಷ್ಠಾಪನೆಯನ್ನು ಅದಷ್ಟು ಬೇಗ ಪೂರ್ಣಗೊಳಿಸಲು ದಾಸರು ತವಕಿಸುತ್ತಿದ್ದರು. ಶಿಷ್ಯರಿಗೆ ಸೂಕ್ತ ಸಲಹೆಗಳನ್ನು ನೀಡುತ್ತಾ ತಾವೇ ಖುದ್ದಾಗಿ ಪ್ರತಿಷ್ಠಾಪನಾ ಕಾರ್ಯದ ಉಸ್ತುವಾರಿ ವಹಿಸಿದ್ದರು.

ಫಾಲ್ಗುಣ ಬಹುಳ ಪಂಚಮಿಯಂದು ಪ್ರಾಣದೇವರನ್ನು ವಿಧ್ಯುಕ್ತವಾಗಿ ಪ್ರತಿಷ್ಠಾಪಿಸಬೇಕೆಂದು ದಾಸರು ಸಂಕಲ್ಪಿಸಿದರು. ದಾಸರ ಸಂಕಲ್ಪಶಕ್ತಿ, ಶಿಷ್ಯರ ಸಹಕಾರ ಮತ್ತು ಪರಮಾತ್ಮನ ಕೃಪೆಯಿಂದ ಕಟ್ಟಡ ಕಾರ್ಯ ಪೂರ್ಣ ಗೊಂಡಿತ್ತು. ದಾಸಕೂಟ ಸಭಾಮಂದಿರ ತಳಿರು ತೋರಣಗಳಿಂದ ಅಲಂಕೃತ

ಗೊಂಡು ಮಂಗಳಕರವಾಗಿ ಶೋಭಿಸುತ್ತಿತ್ತು. ದಾಸರು ಅಂದುಕೊಂಡ ಶುಭ ಮುಹೂರ್ತವು ಸಮೀಪಿಸಿತು. ಪ್ರತಿಷ್ಠಾಪನಾಂಗವಾಗಿ ನಡೆಯಬೇಕಾದ ಹೋಮಾದಿ ಕಾರ್ಯಗಳು ಸಾಂಗವಾಗಿ ನಡೆದವು. ಮಂಗಳವಾದ್ಯಗಳು ಮೊಳಗಿದವು. ದ್ವಿಜೋತ್ತಮರ ವೇದಘೋಶ ಮುಗಿಲುಮುಟ್ಟಿತು. ಹರಿದಾಸರೆಲ್ಲರೂ ತಾಳ, ತಂಬೂರಿಗಳೊಂದಿಗೆ ಭಗವಂತನ ಗುಣಗಾನ ಮಾಡುತ್ತಾ ನರ್ತನ ಮಾಡತೊಡಗಿದರು. ತಮ್ಮ ಮನೋ ಬಯಕೆಯನ್ನು ಈಡೇರಿಸಿದ ಪರಮಾತ್ಮನ ಕಾರುಣ್ಯವನ್ನು ನೆನೆದೋ ಏನೋ ದಾಸರ ಕಣ್ಣಂಚಿನಲ್ಲಿ ಆನಂದಭಾಷ್ಪ ಜಿನುಗುತ್ತಿತ್ತು. ಆಗ ದೇವರಾಯದುರ್ಗದ ದಾಸಕೂಟ ಸಭಾಮಂದಿರದಲ್ಲಿ ಪ್ರಾಣದೇವರ ಪ್ರತಿಷ್ಠಾಪನೆಯಾಯಿತು. ಆ ಸಂದರ್ಭದಲ್ಲಿ ಶ್ರೀಲಕ್ಷ್ಮೀನರಸಿಂಹ ಸ್ವಾಮಿಯ ದೇವಸ್ಥಾನದಲ್ಲಿ ಬಿಡಾರ ಮಾಡಿದ್ದ ಶ್ರೀಕೃಷ್ಣದಾಸತೀರ್ಥರೆಂಬ ಯತಿಗಳು ಪ್ರತಿಷ್ಠಾಪನಾ ಕಾರ್ಯವನ್ನು ವಿದ್ಯುಕ್ತವಾಗಿ ನಡೆಸಿಕೊಟ್ಟರು.

ಕದರುಮಂಡಲಿಗಿಯ ಕಾಂತೇಶನ ಸನ್ನಿಧಿಯಿಂದ ಬಂದು ತಮ್ಮ ಅಪೇಕ್ಷೆಯಂತೆ ದಾಸಕೂಟ ಸಭಾ ಮಂದಿರದಲ್ಲಿ ವಿರಾಜಮಾನರಾದ ಪ್ರಾಣದೇವರನ್ನು ದಾಸರು "ಸುಂದರೇಶ" ಎಂದು ಕರೆದರು. ಹೆಸರಿಗೆ ತಕ್ಕಹಾಗೆ ಸುಂದರೇಶ ಪ್ರಾಣದೇವರು ನೋಡುವವರ ಕಣ್ಮನಗಳನ್ನು ಸೆಳೆಯುವ ಭಂಗಿಯಲ್ಲಿ ನಿಂತಿದ್ದು. ಬಂದು ಬೇಡುವ ಭಕ್ತರ ಮನೋಕಾಮನೆಗಳನ್ನು ಇಂದಿಗೂ ಪೂರೈಸುತ್ತಿದ್ದಾರೆ. ದಾಸಕೂಟಸ್ಥರನ್ನು ಒಟ್ಟುಗೂಡಿಸುವ ಸ್ಫೂರ್ತಿಯ ಸೆಲೆಯಗಿ, ತಂದೆ ಮುದ್ದುಮೋಹನದಾಸರ ಸಿದ್ಧಿ-ಸಾಧನೆಗಳ ಪ್ರತಿಮೂರ್ತಿಯಾಗಿ ಕಂಗೊಳಿಸುತ್ತಿದ್ದಾರೆ.

## ದಾಸರ ಅಂತ್ಯ

ಸುಂದರೇಶ ಪ್ರಾಣದೇವರನ್ನು ದೇವರಾಯನದುರ್ಗದ ದಾಸಕೂಟ ಸಭಾಮಂದಿರಲದಲ್ಲಿ ಪ್ರತಿಷ್ಠಾಪಿಸಿದ ಕೇವಲ ಹದಿನೆಂಟು ದಿನಗಳ ನಂತರ ತಂದೆ ಮುದ್ದುಮೋಹನದಾಸರ ಶರೀರದಿಂದ ಪ್ರಾಣದೇವರು ಪ್ರಯಾಣ ಮಾಡಿದರು. ನಾಲ್ಕು ಜನ ಮಕ್ಕಳು ಮತ್ತು ಅನೇಕ ಮೊಮ್ಮಕ್ಕಳಲ್ಲದೆ ಸಾವಿರದ

ನೂರೈವತ್ತೈದು ಮಂದಿ ಶಿಷ್ಯರು ಹಾಗೂ ಅಸಂಖ್ಯಾತ ಅಭಿಮಾನಿಗಳನ್ನು ಪಡೆದಿದ್ದ ದಾಸರು ಎಪ್ಪತ್ತೈದು ವರ್ಷಗಳ ತುಂಬು ಬಾಳುವೆಯನ್ನು ನಡೆಸಿದರು. ದೇಹಕ್ಕೆ ಮುಪ್ಪು ಆವರಿಸತೊಡಗಿದಾಗ ಜ್ಞಾನಿಗಳಾದ ದಾಸರು ತಮ್ಮ ಅವತಾರ ಸಮಾಪ್ತಿಯ ಸಮಯವನ್ನು ಮುಂಚಿತವಾಗಿ ಅರಿತುಕೊಂಡರು. ತಮ್ಮ ಶಿಷ್ಯರನ್ನು ಕರೆಸಿಕೊಂಡು ಆಶೀರ್ವದಿಸಿದರು. ಕೊನೆಯುಸಿರೆಳೆಯುವ ಮುನ್ನ ತಾವೇ ಸ್ಥಾಪಿಸಿದ ಶ್ರೀಸುಂದರೇಶ ಪ್ರಾಣದೇವರಿಗೆ ನಮಿಸಿ ನಂತರ ತಮ್ಮ ಉಪಾಸ್ಯಮೂರ್ತಿಯಾದ ಶ್ರೀಲಕ್ಷ್ಮೀನರಸಿಂಹ ಸ್ವಾಮಿಯ ಸನ್ನಿಧಿಗೆ ತೆರಳಿ ಮನಸ್ಸಿಗೆ ತೃಪ್ತಿಯಾಗು ವವರೆಗೂ ಅವನನ್ನು ಧ್ಯಾನಿಸಿದರು. ಅಗಣಿತ ಮಹಿಮನಾದ ಪರಮಾತ್ಮ ತಮ್ಮ ಮೂಲಕ ನಡೆಸಿದ ಬಗೆಬಗೆಯ ವ್ಯಾಪಾರಗಳನ್ನು ನೆನೆದು ವಿಸ್ಮಯಪಟ್ಟರು. ಗುರುವಾಜ್ಞೆಯಂತೆ ತಾವು ನೀಡಿದ ಸಾವಿರಕ್ಕೂ ಮಿಗಿಲಾದ ಅಂಕಿತನಾಮ ಗಳನ್ನು ಒಂದೊಂದಾಗಿ ಪಠಿಸುತ್ತಾ ಎಲ್ಲವನ್ನೂ ಆ ಸಾಸಿರನಾಮದೊಡೆಯ ನಾದ ಶ್ರೀಲಕ್ಷ್ಮೀನರಸಿಂಹನ ಪಾದಪದ್ಮಗಳಿಗೆ ಅರ್ಪಿಸಿದರು. ಸ್ವಲ್ಪ ಸಮಯ ಅಂತರ್ಮುಖಿಯಾಗಿದ್ದ ದಾಸರು ನಂತರ ನಿಧಾನವಾಗಿ ಧ್ಯಾನದಿಂದ ಎಚ್ಚೆತ್ತು "ನಿನ್ನನ್ನು ಪೊಂದಿದವರನ್ನು ರಕ್ಷಿಸು ನರಸಿಂಹ" ಎಂದು ಕೈಮುಗಿದು ಕೇಳಿಕೊಂಡು ಜಗತ್ತಿಗೆ ಕಲ್ಯಾಣವನ್ನು ಬಯಸಿ ತಮ್ಮ ವಾಸಸ್ಥಳಕ್ಕೆ ಹಿಂದಿರುಗಿದರು.

ಅಂದು ಶ್ರೀರಾಮನವಮಿ. ದಾಸಕೂಟ ಸಭಾಮಂದಿರದಲ್ಲಿ ಪ್ರಾಣದೇವರಿಗೆ ವಿಶೇಷಾಲಂಕಾರ ನಡೆಯುತ್ತಿದೆ. ಶ್ರೀಲಕ್ಷ್ಮೀನರಸಿಂಹ ಸ್ವಾಮಿಯ ದೇವಸ್ಥಾನ ದಲ್ಲಿ ಮಹಾಮಂಗಳಾರತಿಯಾಗುತ್ತಿದೆ. ಆ ಮಂಗಳ ಮುಹೂರ್ತದಲ್ಲಿ ತಂದೆ ಮುದ್ದುಮೋಹನದಾಸರು ತಮ್ಮ ಬಿಂಬಮೂರ್ತಿಯನ್ನು ಸ್ಮರಿಸಿ ಲಯಚಂತನೆ ಮಾಡುತ್ತಾ ತಂದೆ ಮುದ್ದುಮೋಹನವಿಠಲನ ಅಂತಃಪುರವನ್ನು ಸೇರಿದರು. ಸಾಧನ ಮಾರ್ಗ ತಿಳಿಯದೆ ತೊಳಲುತ್ತಿದ್ದ ಅಸಂಖ್ಯಾತ ಸುಜೀವಿಗಳ ಹೃದಯಗಳಿಗೆ ಬೆಳಕು ನೀಡಲು ಬಂದಿಳಿದ ಮಹಾಬೆಳಕೊಂದು ಕ್ರಿ.ಶ. 16.4.1940ರ ವಿಕ್ರಮ ಸಂವತ್ಸರ ಚೈತ್ರ ಶುದ್ಧ ನವಮಿ ಮಂಗಳವಾರದಂದು ತಾನು ಬೀರಿದ ಬೆಳಕನ್ನು ಉಳಿಸಿ ಕಣ್ಮರೆಯಾಗಿ ಹೋಯಿತು.

# ಸ್ಫೂರ್ತಿಯ ಸೆಲೆ

ತಂದೆ ಮುದ್ದುಮೋಹನದಾಸರು ಕಣ್ಮರೆಯಾದರೂ ಅವರು ಬೀರಿದ ಬೆಳಕು ಮರೆಯಾಗಿಲ್ಲ. ಇನ್ನು ಪ್ರಖರ ಪ್ರಭೆಯನ್ನು ಬೀರುತ್ತಲೇ ಇದೆ. ಸಹಸ್ರಾರು ಹೃದಯಗಳನ್ನು ಬೆಳಗಿದ ಬೆಳಕು ಮತ್ತೆ ನೂರ್ಮಡಿಯಾಗಿ ಹರಡಿ ನಾಸ್ತಿಕತೆಯ ಗಾಡಾಂಧಕಾರವನ್ನು ಛೇದಿಸುತ್ತಿದೆ. ಶಾಶ್ವತ ಸುಖದ ಸೋಪಾನದ ಕಡೆಗೆ ನಂಬಿದವರನ್ನು ಕೈಹಿಡಿದು ಮುನ್ನಡೆಸುತ್ತಿದೆ.

ದಾಸರ ಸಿದ್ಧಿ-ಸಾಧನೆಗಳು ಅನುಪಮವಾದದ್ದು. ನೂರ್ಕಾಲ ನಿಲ್ಲುವಂಥದ್ದು. ಹರಿದಾಸ ಸಾಹಿತ್ಯದ ಮಹಾವೃಕ್ಷ ದಾಸರಿಂದ ಮತ್ತೆ ಚಿಗುರೊಡೆದು ಫಲ ನೀಡಿತು. ದಾಸರ ಕೃಪಾಭಾತ್ರದಲ್ಲಿ ಸಹಸ್ರಾರು ಸುಜೀವಿಗಳು ಉದ್ಧೃತರಾದರು. ತಂದೆ ಮುದ್ದುಮೋಹನದಾಸರ ಸುವರ್ಣ ಯುಗದಲ್ಲಿ ಅನೇಕ ದೇವತೆಗಳೂ ಹರಿದಾಸರಾಗಿ ಅವತರಿಸಲು ತವಕಿಸಿದರು.

ದಾಸಧರ್ಮ ಜೀವಂತವಾಗಿರುವವರೆಗೂ ದಾಸರ ಹೆಸರು, ಅವರು ಮಾಡಿದ ಸಾಧನೆ ಮತ್ತು ಗಳಿಸಿದ ಸತ್ಕೀರ್ತಿ ಜೀವಂತವಾಗಿರುತ್ತವೆ. ಅವರು ತೋರಿದ ಆದರ್ಶ ನಾಳಿನ ಬಾಳಿಗೆ ಸ್ಫೂರ್ತಿಯ ಸೆಲೆಯಾಗಿ ಬದುಕನ್ನು ಉದ್ದೀಪನಗೊಳಿಸುತ್ತದೆ.

"ಪರಮಪ್ರಿಯನೆ ಗುರುವೆಂದ ಮಾತ್ರದಿಂ
ವರ ತಂದೆ ಮುದ್ದುಮೋಹನ ವಿಠಲ ಒಲಿವ॥"





# ಶ್ರೀ ತಂದೆ ಮುದ್ದುಮೋಹನದಾಸರು

ಶ್ರೀ ತಂದೆ ಮುದ್ದುಮೋಹನದಾಸರು ಪುರಂದರದಾಸರಿಂದ ಬೆಳೆಸಲ್ಪಟ್ಟ, ಶ್ರೀವಿಜಯದಾಸರಿಂದ ಮುಂದುವರೆಸಲ್ಪಟ್ಟ ಶ್ರೀವೇಣು ಗೋಪಾಲದಾಸರ ಪಾವನ ಪೀಳಿಗೆಯಲ್ಲಿ ಬಂದ ಹರಿದಾಸ ಶ್ರೇಷ್ಠರು. ಎಲ್ಲೋ ಹರಿಯುತ್ತಿದ್ದ ಹರಿದಾಸ ಪರಂಪರೆಗೆ ಹೊಸ ಕಸುವನ್ನೂ, ಹೊಸ ತಿರುವನ್ನೂ ನೀಡಿ, ಹರಿದಾಸ ಸಾಹಿತ್ಯವಾಹಿನಿ ಸಾಗರರೂಪ ತಾಳಿ ಭೋರ್ಗರೆದು ಉಕ್ಕಿ ಹರಿಯುವಂತೆ ಮಾಡಿದರು. ಹರಿದಾಸ ಪಂಥದ ವ್ಯವಸ್ಥಿತವಾದ ಬೆಳವಣಿಗೆಗೆ ಕಾರಣರಾದರು. ಜಾತಿ, ಮತ, ಪಂಗಡಗಳ ಭೇದವೆಣಿಸದೆ ಸಾವಿರಾರು ಸುಜೀವಿಗಳನ್ನು ಹೆಕ್ಕಿ ತೆಗೆದು ದಾಸರು ಅಂಕಿತೋಪದೇಶ ನೀಡಿದರು. ಹರಿಕೈಂಕರ್ಯಕ್ಕೆ ಜಾತಿ-ಮತಗಳ ಕಟ್ಟುಪಾಡಿಲ್ಲವೆಂಬ ನಿತ್ಯಸತ್ಯವನ್ನು ಅವರು ಎತ್ತಿ ಹಿಡಿದರು. ಪತಿತರಾಗಿ ಪರಿತಪಿಸುತ್ತಿದ್ದವರಲ್ಲಿಯೂ ದಯೆ ತೋರಿ ಅನುಗ್ರಹಿಸಿ ಅವರಿಂದ ಲೋಕ ಕಲ್ಯಾಣ ಕಾರ್ಯ ಸಾಧಿಸಿದರು.

ಜಗತ್ತಿನಲ್ಲಿ ದಾಸಧರ್ಮ ಜೀವಂತವಾಗಿರುವವರೆಗೂ ತಂದೆ ಮುದ್ದು ಮೋಹನ ದಾಸರ ಹೆಸರು, ಅವರು ಮಾಡಿದ ಸಾಧನೆ ಮತ್ತು ಗಳಿಸಿದ ಸತ್ಕೀರ್ತಿ ಜೀವಂತವಾಗಿರುತ್ತವೆ. ದಾಸರು ತೋರಿದ ಆದರ್ಶ ನಾಳಿನ ಬಾಳಿಗೆ ಸ್ಫೂರ್ತಿಯ ಸೆಲೆಯಾಗಿ ಬದುಕನ್ನು ಉದ್ದೀಪನ ಗೊಳಿಸುತ್ತದೆ.






ಬೆಲೆ : ರೂ. 30/-